# ಕೊಡಗು ಸಂಗಾತಿ

ಡಿಸೆಂಬರ್ 16 ರಿಂದ 31, 1999 ಪಾಕ್ಷಿಕ ಪತ್ರಿಕೆ (ಜಾರ್ದೆ 30, ಪೆರಾರ್ದೆ 1 ರಿಂದ 15, 1999)

ನಂ. ೩೫, ಸವಿತಾ ನಿಲಯ, ೧೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R. N. N. 240 ಸಂಪುಟ : 3 ಸಂಚಿಕೆ : 24 ಪುಟಗಳು : 24 ಬೆಲೆ ರೂ. : 5-00




**21ನೇ ಶತಮಾನವನ್ನು ಮಿ. ಗೋಲ್ಡನ್ ರೆಟಿವರ್ ಬೆರಗುಗಣ್ಣಿನಿಂದ ನೋಡುತ್ತಿರುವಂತಿದೆ - 2000 - ????**

## ಸಂಗಾತಿ ಓದುಗರಿಗೆಲ್ಲರಿಗೂ ಮತ್ತು ನಾಡಿನ ಜನತೆಗೂ
## ಹೊಸ ವರ್ಷದ ಶುಭಾಶಯಗಳು

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
ಪಟ್ಟಡ ಪಿ. ಶೀಲಾಮಣಿ

ಗೌರವ ಸಂಪಾದಕ :
ಪಟ್ಟಡ ಎಂ. ಪ್ರಭಾಕರ

**ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ :**

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಜಯಲಕ್ಷ್ಮಿಪುರಂ, ಮೈಸೂರು - 570 012.
**ಫೋನ್ : 0821/516771**

**ಮಡಿಕೇರಿಯಲ್ಲಿ ಸಂಗಾತಿ ಕಛೇರಿ**

ಸಂಗಾತಿ ಚಿಹ್ನೆ ಮತ್ತು ಪಾಕ್ಷಿಕ ಲಭ್ಯ
ಬೈತಡ್ಕ ಜಾನಕಿ ಬೆಳ್ಯಪ್ಪ
ನಂ. 21-16 ಎಲ್. ಐ. ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕೊಡಗು ಸಂಗಾತಿ ಚಿಹ್ನೆ ಲಭ್ಯ**

ಪಾಂಡ್ಯನ್ ಕ್ಯಾಸೆಟ್ ಅಂಗಡಿ,
ಖಾಸಗಿ ಬಸ್ ನಿಲ್ದಾಣ, ಮಡಿಕೇರಿ - 571 2[illegible]
ದೂರವಾಣಿ : 08272/29620

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ - 571 234
ದೂರವಾಣಿ : 08276/73370 (R.)

ಅಮ್ಮಾಜೀರ ಪೊನ್ನಪ್ಪ
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು - 04
ದೂರವಾಣಿ - 080/6342822

ಕಲ್ಲುಮುಟ್ಲು ಬಸಪ್ಪ
ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್,
ಕೆಂಪೇಗೌಡ ನಗರ, ಬೆಂಗಳೂರು - 19
ದೂರವಾಣಿ - 080/6549669







## ಅರೆಭಾಷಿಕ ವಿಭಾಗ



## ಚಂದಾ ವಿವರ

| | | |
|---|---|---|
| ಜೀವಾವಧಿ ಸದಸ್ಯತನ | - | 2000 ರೂ. |
| ವಾರ್ಷಿಕ ಚಂದಾ | - | 120 ರೂ. |
| ಅರ್ಧ ವಾರ್ಷಿಕ | - | 60 ರೂ. |
| ಬಿಡಿ ಪ್ರತಿ | - | 5 ರೂ. |

## ದಿನಾಂಕ 26-12-1999ರಂದು ಮಡಿಕೇರಿಯ ಕೊಡಗು ಗೌಡ ವಿದ್ಯಾ ಸಂಘದ ಆಶ್ರಯದಲ್ಲಿ "ಮುಖಾಮುಖಿ ಕಾರ್ಯಕ್ರಮ

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಅಭಿವೃದ್ಧಿ ನಿಮಿತ್ತ ಲೇಖಕರು ಹಾಗೂ ಓದುಗರಿಂದ ಮುಖಾಮುಖಿ ಪ್ರಶ್ನಾವಳಿ ಕಾರ್ಯಕ್ರಮವನ್ನು ಇದೇ ತಿಂಗಳ ಡಿಸೆಂಬರ್ 26ರಂದು ಮಡಿಕೇರಿಯಲ್ಲಿರುವ ಕೊಡಗು ಗೌಡ ವಿದ್ಯಾ ಸಂಘದ ಕಟ್ಟಡದಲ್ಲಿ ಹಮ್ಮಿಕೊಳ್ಳಲಾಗಿದೆ. ಆಸಕ್ತರು ತಮ್ಮ ತಮ್ಮ ಅನಿಸಿಕೆಗಳನ್ನು, ಪ್ರಶ್ನೆಗಳನ್ನು, ಇತರ ಅಭಿಪ್ರಾಯವನ್ನು ಅಂದು ನೀಡಿ ತಮ್ಮ ಅನುಮಾನವನ್ನು ಬಗೆಹರಿಸಲು ಸದವಕಾಶವನ್ನು ಕಲ್ಪಿಸಲಾಗಿದೆ. ಬರಲು ಸಾಧ್ಯವಿಲ್ಲದೆ ಇರುವ ಓದುಗರು ಪತ್ರ ಮುಖೇನ ದಿನಾಂಕ 20ರ ಒಳಗೆ ಕೊಡಗು ಸಂಗಾತಿ ಕಛೇರಿಗೆ ಕಳುಹಿಸಿಕೊಡುವಂತೆ ಈ ಮೂಲಕ ಕೋರಲಾಗಿದೆ. ಕಾರ್ಯಕ್ರಮವು ಮಧ್ಯಾಹ್ನ 2-00 ಗಂಟೆಯಿಂದ ಸಂಜೆ 5ರ ತನಕ ನಡೆಯಲಿರುವುದು. ಬಾರಿಯಂಡ ಜೋಯಪ್ಪ, ಗುಡ್ಡೆಮನೆ ರಮೇಶ್, ಪಟ್ಟಡ ಶಿವಕುಮಾರ್, ಬೈತಡ್ಕ ನವೀನ್ ಬೆಳ್ಯಪ್ಪ ಕಾರ್ಯಕ್ರಮವನ್ನು ನಡೆಯಿಸಿ ಕೊಡಲಿದ್ದಾರೆ.

- ಸಂಪಾದಕಿ

ಸಂಪರ್ಕಿಸಿ : ನವೀನ್ ಬೆಳ್ಯಪ್ಪ, ಮಡಿಕೇರಿ ಶಾಖೆ
'ಮುಖಾಮುಖಿ ವಿಭಾಗ', C/o ಕೊಡಗು ಸಂಗಾತಿ, ನಂ. 21-16,
ಎಲ್.ಐ.ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ ✆ : 08272/28047

## ಉತ್ತಮ ತಳಿಯ ನಾಯಿ ಮರಿಗಳು ಮಾರಾಟಕ್ಕಿವೆ



ಲ್ಯಾಬಡಾರ್, ಡಾಬರ್ ಮ್ಯಾನ್, ಆಲ್‌ಶೇಷನ್, ಜರ್ಮನಿ ಶೆಪರ್ಡ್, ಗೋಲ್ಡನ್ ರೆಟಿವರ್, ಗ್ರೇಟ್‌ಡನ್ಸ್, ಡಾಲ್ಮೇಶನ್ ಹಾಗೂ ಇತರ ಎಲ್ಲಾ ತರದ ನಾಯಿ ಮರಿಗಳು ಸೂಕ್ತ ಬೆಲೆಯಲ್ಲಿ ಲಭ್ಯವಿದೆ.

ಮೂರು ತಿಂಗಳ ಮೇಲ್ಪಟ್ಟ ಮರಿಗಳಿಗೆ ತರಬೇತಿ ನೀಡಲು ತರಬೇತುದಾರರು ಇದ್ದಾರೆ.

ಆಸಕ್ತರು ಸಂಪರ್ಕಿಸಿ : 0821 / 516771

ಭಾಸ್ಕರ್
C/o ಕೊಡಗು ಸಂಗಾತಿ, 35, ಸವಿತಾ ನಿಲಯ,
1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿ ಪುರಂ, ಮೈಸೂರು -12

## ಅರೆಭಾಷಿಕ ಮಾಜಿ ಸೈನಿಕರ ಸಹಕಾರ ಸಂಘ, ಮೈಸೂರು.

(ಭೂ ದಳ, ವಾಯುದಳ, ನೌಕಾದಳ, ಪ್ಯಾರ ಮಿಲಿಟರಿ, ಸಿ.ಆರ್.ಪಿ.ಎಫ್., ಬಿ.ಎಸ್.ಎಫ್., ಸಿ.ಎಸ್.ಎಫ್., ಕೋಸ್ಟಲ್ ಗಾರ್ಡ್ಸ್)

ಹೊಸ ಶತಮಾನಕ್ಕೆ ಕಾಲಿಡಲು ಕೆಲವೇ ದಿನಗಳು ಬಾಕಿಯಿದೆ. ಹೊಸತನ್ನು ಬರಮಾಡಿ ಹಳತನ್ನು ಬೀಳ್ಕೊಡುವುದು ಸಂಪ್ರದಾಯ. ಅಂದ ಹಾಗೆ 31-12-99ರಂದು ಜಯಲಕ್ಷ್ಮೀಪುರಂನಲ್ಲಿರುವ ನಮ್ಮ ಸಮಾಜದ ಕಟ್ಟಡದಲ್ಲಿ ಮಾಜಿ ಸೈನಿಕರು ಮತ್ತು ಅವರ ಸಂಸಾರ ಹಾಗೂ ಅವಲಂಬಿತರುಗಳ ಸಂತೋಷ ಕೂಟವನ್ನು ನಡೆಯಿಸಲು ಏರ್ಪಡಿಸಲಾಗಿದೆ. ಮೈಸೂರು ಜಿಲ್ಲೆಯಲ್ಲಿರುವ ಆಸಕ್ತ ಅರೆಭಾಷಿಕ ಗೌಡ ಮಾಜಿ ಸೈನಿಕರು ತಪ್ಪದೆ ಈ ಕೆಳಗಿನ ವಿಳಾಸದಲ್ಲಿ ಸಂಪರ್ಕಿಸುವಂತೆ ಕೋರಲಾಗಿದೆ. ಭೋಜನ ವ್ಯವಸ್ಥೆ ಇದೆ. ಕಾರ್ಯಕ್ರಮವು ಸಂಜೆ ಆರು ಗಂಟೆಯಿಂದ ಎಂಟು ಗಂಟೆತನಕ ಇರುವುದು. ಸರ್ವ ಅರೆಭಾಷಿಕ ಗೌಡ ಮಾಜಿ ಸೈನಿಕರು ಇದನ್ನೆ ಆಹ್ವಾನ ಪತ್ರಿಕೆ ಎಂದು ಭಾವಿಸಿ ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸಿ ಯಶಸ್ವಿಗೊಳಿಸುವಂತೆ ಕೋರಲಾಗಿದೆ.

ಸಂಘಟನಾ ಕಾರ್ಯದರ್ಶಿ : ಕರ್ಣೇಯ್ಯನ ಲಕ್ಷ್ಮಣ
✆ : 489052, 516771, ನಂ. 1047/28 'A', 2ನೇ ಮುಖ್ಯ ರಸ್ತೆ, 7ನೇ ಕ್ರಾಸ್, ವಿದ್ಯಾರಣ್ಯಪುರಂ, ಮೈಸೂರು

## ಮೈಸೂರು ಜಿಲ್ಲೆಯ ಅರೆಭಾಷಿಕ ಗೌಡ ಯುವಕರಿಗೊಂದು ಸುವಾರ್ತೆ



ಜನಾಂಗದ ಅಭಿವೃದ್ಧಿ ಮತ್ತು ಸಂಘಟನೆಗೆ ಕ್ರೀಡೆ ಅನಿವಾರ್ಯ. ಮೈಸೂರು ಜಿಲ್ಲೆಯಲ್ಲಿ ವಾಸವಿರುವ ಯುವಕರನ್ನು ಕಲೆ ಹಾಕಿ ನಮ್ಮ ಜನಾಂಗದ ಒಂದು ಉತ್ತಮ ಕ್ರಿಕೆಟ್ ತಂಡವನ್ನು ಕಟ್ಟುವ ಅಭಿಪ್ರಾಯವಿರುವುದು. ಆಸಕ್ತಿ ಇರುವ ಯುವಕರು ಹೆಚ್ಚಿನ ವಿವರಗಳಿಗೆ ಈ ಕೆಳಗಿನ ವಿಳಾಸದಲ್ಲಿ ಸಂಪರ್ಕಿಸುವಂತೆ ಕೋರಲಾಗಿದೆ.

ಸಂಘಟನಾ ಕಾರ್ಯದರ್ಶಿ : ದೀಪಕ್
✆ : 516771, C/o ಕೊಡಗು ಸಂಗಾತಿ, 35, ಸವಿತಾ ನಿಲಯ,
1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿ ಪುರಂ, ಮೈಸೂರು -12

# ಮೈಸೂರಿನಲ್ಲಿ ವಿಜೃಂಭಿಸಿದ ಹುತ್ರಿ, ನಿರೀಕ್ಷೆಗೂ ಮೀರಿದ ಜನ ಸಮೂಹ, ಬುಡ ಮೇಲಾದ ನಿರೀಕ್ಷೆ, ಜನ ಸಂಘಟನೆಗೆ ನಾಂದಿ.

ದಿನಾಂಕ 24-11-1999ರಂದು ಮೈಸೂರಿನಲ್ಲಿ ನೆಲೆಸಿದ್ದ ಅರೆಭಾಷಿಕ ಗೌಡ ಸಮುದಾಯವು ಹುತ್ರಿಯನ್ನು ಆಚರಿಸಿತು. ಕೇವಲ ಒಂದೇ ವಾರದ ಸಂಘಟನೆಯಲ್ಲಿ ತೊಡಗಿದ ಸಂಘಟನೆಕಾರರು ಅಭೂತಪೂರ್ವ ಯಶಸ್ಸು ಕಾಣುವಲ್ಲಿ ಸಫಲರಾದರು. ಇದೇ ಮೊದಲ ಬಾರಿಗೆ ಸುಮಾರು 350ಕ್ಕೂ ಮಿಕ್ಕಿ ಜನಾಂಗದ ಬಾಂಧವರು ಆಗಮಿಸಿ ಸಂತಸಪಟ್ಟರು. ಸಂಗಾತಿ ಪತ್ರಿಕೆಯಲ್ಲಿ ಆಮಂತ್ರಣ ಕೊಟ್ಟಿದ್ದಲ್ಲದೆ, ಪ್ರತಿಯೊಬ್ಬರಿಗೂ ಪತ್ರ ಮೂಲಕ ತಿಳಿಸಿದ್ದಲ್ಲದೆ ಹಲವಾರು ದೂರವಾಣಿ ಕರೆಗಳ ಮೂಲಕ ಸಂಪರ್ಕಿಸುವುದರೊಂದಿಗೆ ಈ ಸಲದ ಹುತ್ರಿ ಕದಿರು ತೆಗೆಯಲು ಜನ ಸಮೂಹವು ಸಂಜೆ ಐದು ಗಂಟೆಯಿಂದಲೇ ಆಗಮಿಸತೊಡಗಿದ್ದರಿಂದ, ಅವರನ್ನು ಸ್ವಾಗತಿಸುವ ಕಾರ್ಯವು ಒಂದೆಡೆ ಸಾಗುತ್ತಿತ್ತಾದರು, ಆಮಂತ್ರಣದಲ್ಲಿ ಸಮಯ ನೀಡಿದಂತೆಯೇ ಅದಕ್ಕೆ ಮೊದಲಾಗಿಯೇ ಹಿರಿಯರಾದ ಶ್ರೀ ಕಟ್ರತನ ನಾಣಯ್ಯ ದಂಪತಿಗಳು ಆಗಮಿಸಿ ಸಂಘಟಿತರನ್ನು ಚಕಿತಗೊಳಿಸುವ ಘಟನೆಯೊಂದು ನಡೆಯಿತು. ಅನಿವಾರ್ಯವಾಗಿ ಸಾಂಸ್ಕೃತಿಕ ಕಾರ್ಯಕ್ರಮವನ್ನು ನಡೆಸಲು ಆಗಲಿಲ್ಲವಾದರು ಜನ ಬರುತ್ತಿದ್ದಂತೆ ಅವರನ್ನು ವಿದ್ಯಾಸಂಘದ ಕಟ್ಟಡದ ಮುಖ್ಯ ದ್ವಾರದಲ್ಲಿ ಸ್ವಾಗತಿಸಿ ಸಮಾರಂಭಕ್ಕೆ ಬರಮಾಡಿಕೊಳ್ಳುತ್ತಿದ್ದುದು ನಿಜಕ್ಕೂ ಪ್ರಶಂಸನೀಯವಾದುದು.

ರಾತ್ರಿ ಎಂಟು ಗಂಟೆಗೆ ನೆರೆದ ಹಿರಿಯರು, ಮಕ್ಕಳಾದಿಯಾಗಿ ನೆರೆಕಟ್ಟಲು ಭಾಗವಹಿಸಿದ್ದರು. ನೆರೆಕಟ್ಟಿದ ನಂತರ ಫಲಹಾರ ಕಾರ್ಯಕ್ರಮವಿದ್ದಿತು. ಮೈಸೂರಿನ ಮಹಿಳಾ ಒಕ್ಕೂಟ ಸದಸ್ಯರು ತಂಬಿಟ್ಟು ಫಲಹಾರವನ್ನು ನೀಡಿದ್ದರು. ತಂಬಿಟ್ಟಿನ ಸವಿಯನ್ನು ಮೆಲ್ಲುತ್ತಿದ್ದ ಮಕ್ಕಳನ್ನು ನೋಡಲು ಮೋಜೆನಿಸುತ್ತಿತ್ತು. ಪದ್ಧತಿಯಂತೆ ಕುಲದೇವ್ರು ವೆಂಕಟರಮಣನನ್ನು, ಕಾವೇರಿ ಮಾತೆ, ಇಗುತ್ತಪ್ಪನನ್ನು ನೆನೆಯುತ್ತಾ, ನಿರೀಕ್ಷೆಗೆ ಮೀರಿ ಸೇರಿದ ಜನರನ್ನು ಇನ್ನು ಮುಂದಕ್ಕೂ ಸಹ ಇದೇ ರೀತಿಯಲ್ಲಿ ಸೇರಿ ಆಚರಿಸುವಂತೆ ಹಿರಿಯರಾದ ನೈಯ್ಯಣೀರ ಕುಶಾಲಪ್ಪನವರು ಪ್ರಾರ್ಥಿಸಿ ಶುಭ ಕೋರಿದರು. ಗೆಂಟಿ ಸೀರೆ ಉಟ್ಟು ಕಂಚಿಮಿಯಾಗಿ ಶೋಭಿಸುತ್ತಿದ್ದ ಶ್ರೀಮತಿ ಮಂಞ್ಞಾಪುರ ಧರಣಿ ಗಣಪತಿಯವರಿಗೆ ತಳಿಯಕ್ಕಿ ಬೆಳಕಿನ ನಂದಾ ದೀವಿಗೆಯನ್ನು, ಅಕ್ಕಿ ಹಾಕಿ ಪ್ರಾರ್ಥಿಸಿ, ಶುಭವನ್ನು ಬಯಸಿ ಎತ್ತಿಕೊಟ್ಟರು ಶ್ರೀಮತಿ ಕುಶಾಲಪ್ಪನವರು. ಹಳೇ ಸಂಪ್ರದಾಯದ ದಟ್ಟಿ ಕುಪ್ಪಸದಲ್ಲಿ ವಿರಾಜಿಸುತ್ತಿದ್ದ ಪಟ್ಟಡ ಸಣ್ಣಯ್ಯನವರ ಹೆಗಲಿಗೆ ಕದಿರು ಗುತ್ತಿಯನ್ನು ಎತ್ತಿಕೊಟ್ಟರು. ಶ್ರೀ ಕುಯ್ಯಮುಡಿ ರಾಮಪ್ಪನವರು. ಕೋವಿಯನ್ನು ಹೆಗಲಿಗೇರಿಸಿದರು ಶ್ರೀ ತಡಿಯಪ್ಪನ ಕುಮಾರ ಜಯನವರು. ರೈತ ಕಷ್ಟ ಪಟ್ಟು ದುಡಿದ ಭತ್ತದ ಬೆಳೆಯು ಸಮೃದ್ಧಿಯಾಗಿ ನಿಂತಿರುವುದನ್ನು ಲಕ್ಷ್ಮಿ ದೇವಿಗೆ ಹೋಲಿಸಿ, ಧಾನ್ಯ ಲಕ್ಷ್ಮಿ, ಲಕ್ಷ್ಮಿ ದೇವಿಯನ್ನು ಸ್ತುತಿಸುವ ಸಂಕೇತವಾದ ಒಕ್ಕಣೆ ಪೊಲಿ ಪೊಲಿಯೇ ಬಾ ಇಗ್ಗುತ್ತಪ್ಪ ಕಾವೇರಮ್ಮ ಪೊಲಿ ಪೊಲಿಯೇ ಬಾ ಎನ್ನುವ ಘೋಷಣೆಯೊಡನೆ ಹೊರಟು ವಿದ್ಯಾ ಸಂಘದ ಆವರಣದಲ್ಲಿಯೇ ಸಜ್ಜುಗೊಳಿಸಿದ ಪುಟಾಣಿ ಗದ್ದೆಗೆ ಧಾವಿಸಲಾಯಿತು.

ಸಂಪ್ರದಾಯದ ಹಳೆ ಉಡುಪಿನಲ್ಲಿ ಧಾನ್ಯಲಕ್ಷ್ಮಿ ಲಕ್ಷ್ಮಿ ದೇವಿಗೆ ನೆರೆ ಕಟ್ಟಿಸಿ ಪ್ರಾರ್ಥಿಸುತ್ತಾ ರಾತ್ರಿ 8-45 ನಿಮಿಷಕ್ಕೆ ಕದಿರು ಕೊಯ್ಯಲಾಯಿತು. ನೆರೆದ ಸುಮಾರು 350 ಜನರಿಂದ ಪೊಲಿ ಪೊಲಿಯೇ ಬಾ ಅನ್ನುವ ಘೋಷಣೆ ಪಟಾಕಿಗಳ ಅಬ್ಬರ ಮುಗಿಲು ಮುಟ್ಟುವಂತಿತ್ತು. ಗುತ್ತಿ ಸಮೇತವಾಗಿ ಕದಿರನ್ನು ಮತ್ತು ಕಂಚಿಮಿಯನ್ನು ಆರತಿ ಬೆಳಗವುದರ ಮೂಲಕ ಮಹಿಳಾ ಸಂಘಟನೆಯ ಮಹಿಳೆಯರು ನೆಲ್ಲಕ್ಕಿಗೆ ಬರಮಾಡಿಕೊಂಡರು, ನಂತರ ನೆರೆದ ಪ್ರತಿಯೊಂದು ಸಂಸಾರಕ್ಕೆ ಎರಡೆರಡು ನೆರೆಯನ್ನು ಮತ್ತು ಕದಿರನ್ನು ವಿತರಿಸಲಾಯಿತು.

ಹಲವಾರು ವರ್ಷಗಳಿಂದ ಮೈಸೂರಿನಲ್ಲಿ ನೆಸಿದ್ದು ಬಾಂಧವರನ್ನು ಒಂದುಗೂಡಿಸುವಲ್ಲಿ ವಿಫಲವಾಗಿದ್ದು, ಪ್ರತಿ ವರ್ಷ 25 ರಿಂದ 30 ಜನರಿದ್ದು ಕದಿರು ಕುಯ್ಯುತ್ತಿದ್ದ ಪರಿಪಾಟಕ್ಕೆ ಮಂಗಳ ಹಾಡಿ ಈ ವರ್ಷ 350 ಜನಕ್ಕಿಂತಲೂ ಅಧಿಕ ಸಂಖ್ಯೆಯಲ್ಲಿ ಸೇರಿ ವಿಜೃಂಭಣೆಯಿಂದ ಆಚರಿಸಿದ್ದು ವಿಶೇಷವಾಗಿತ್ತು. ಹುತ್ರಿ ಆಚರಣೆಯಲ್ಲಿ ನೆರೆ ಕಟ್ಟಲು ಬೇಕಾದ ಎಲೆಗಳನ್ನು, ಪಚ್ಚಿನಾರನ್ನು ನಾಡಿನಿಂದ ತಂದು ಅಂದಿನ ಸಕಲ ಕಾರ್ಯಕಲಾಪಗಳಿಗೆ ಸಿದ್ಧತೆ ನಡೆಸಿದವರು ವಿದ್ಯಾ ಸಂಘದ ಮ್ಯಾನೇಜರ್ ಶ್ರೀ ಪೋರೆಯನ ಆನಂದನವರ ಸೇವೆ ಅವಿಸ್ಮರಣೀಯವಾದದ್ದು. 21ನೇ ಶತಮಾನಕ್ಕೆ ಕಾಲಿಡುವ ಮುನ್ನ ತಮ್ಮ ತಮ್ಮ ತಪ್ಪು ನೆಪ್ಪುಗಳ್ನು ಅರಿತು ಒಗ್ಗೂಡಿ, ಜೊತೆಯಾಗಿ ನಡೆಸಿದ್ದು ನಿಜಕ್ಕೂ ಕಿರೀಟಪ್ರಾಯವಾಗಿದೆ. ಈ ಕಾರ್ಯಕ್ರಮವನ್ನು ವಿದ್ಯಾ ಸಂಘದ ಆಶ್ರಯದಲ್ಲಿ ಮಹಿಳಾ ಒಕ್ಕೂಟ, ಗೌಡ ಯುವಶಕ್ತಿ, ಅರೆಭಾಷಿಕ, ಸಾಂಸ್ಕೃತಿಕ ಸಮಿತಿ ಮತ್ತು ಕೊಡಗು ಸಂಗಾತಿ ಸಂಸ್ಥೆಯ ಸಹಯೋಗದೊಡನೆ ನಡೆಸಲಾಯಿತೆಂದು ತಿಳಿದು ಬಂದಿದೆ.

**ಸಂಗಾತಿ ವರದಿ**

---

## ನಗೆಹನಿಗ

ಕಂಡಕ್ಟರ್ : ಯಾರಿಗೆರ ಟಿಕೆಟ್, ಟಿಕೆಟ್ಸ್
ಸ್ವಾಂಪ : ನಂಗೆ ಒಂದ್ ಆಸ್ಪತ್ರೆಗೆ ಕೊಡಿ
ಕಂಡಕ್ಟರ್ : ಎಲ್ಲಿಂದ ಹತ್ತಿದ್
ಸ್ವಾಂಪ : ಬಾಗ್‌ಲ್‌ಂದ

**ಪ್ರಭಾಕರ ಕೆ. ಆರ್., ತಣ್ಣಿಮಾನಿ**

---

## ಲಗ್ನ ಕಾರ್ಯ

ಮೈಸೂರು ನಿವಾಸಿ ಚೊಕ್ಕಾಡಿ ಗಣಪತಿ ಅವ್ರ ಮಗ್ಳು ಉಷಾಂಗೂ ಮತ್ತೆ ಮೈಸೂರು ವಾಸಿ ಮೊಟ್ಟನ ಬಸಪ್ಪನವ್ರ ಮಂಙ್ಞ ಸುಬ್ರಮಣಿ ಇವಂಗೂ ತಾರೀಖ್ 5-12-1999ರಲ್ಲಿ ಐತ್ವಾರ ಮಡಿಕೇರಿಯ ಕೆಳಗಿನ ಗೌಡ ಸಮಾಜ ಕಲ್ಯಾಣ ಮಂಟಪಲಿ ಭಾರಿ ವಿಜೃಂಭಣೆಯಿಂದ ಮದುವೆ ನಡ್ತ್‌ತ ತಿಳ್ದು ಬಂದುಟು.

# ಸಂಪಾದಕೀಯ : ಹೊಸ ಶತಮಾನದ ಆರಂಭ

ಹಿಂದಿನ ಶತಮಾನದ ಅವಲೋಕನವನ್ನು ಮಾಡಿದಾಗ 1800ನೇ ಇಸವಿಯಿಂದ 1900ನೇ ಇಸವಿಯ ಚರಿತ್ರೆಯನ್ನು ತಿರುವಿದರೆ ಪ್ರಪಂಚದ ಎಲ್ಲಾ ದೇಶಗಳಲ್ಲಿ ಒಂದಲ್ಲ ಒಂದು ರೀತಿಯ ವಸಾಹತುಗಾರರ ಪ್ರಾಬಲ್ಯ ದೇಶಿಯ ರಾಜರುಗಳ ಪಾಳೇಗಾರರ ನಿರಂಕುಶತ್ವ ಕಂಡು ಬರುತ್ತದೆ. 1900ನೇ ಇಸವಿಯಿಂದ 1999ರ ವರೆಗೆ ಹಿಂದೆ ಇದ್ದ ವಸಾಹತುಗಾರ ಆಯಾಯ ಪ್ರದೇಶದ ಜನರು ತಮ್ಮ ಸ್ವತಂತ್ರಕ್ಕಾಗಿ ನಿರಂಕುಶ ಪ್ರಭುತ್ವದ ವಿರುದ್ಧ ಹೋರಾಟ ನಡೆದು ಸ್ವಾತಂತ್ರ್ಯ ಹೋರಾಟ ನಡೆದು ನೂರಕ್ಕೆ 99ರಷ್ಟು ದೇಶಗಳಲ್ಲಿ ಪ್ರಜಾಪ್ರಭುತ್ವ ಸ್ಥಾಪನೆಯಾಗಿದೆ. ಕೆಲವು ರಾಷ್ಟ್ರಗಳಲ್ಲಿ ಹಿಂದಿನ ರಾಜ ಮನೆತನದ ಅಧಿಕಾರ ಮುಂದುವರೆದರೂ ಅವರೆಲ್ಲ ಹೆಸರಿಗೆ ಮಾತ್ರ ರಾಜ ಯಾ ಚಕ್ರವರ್ತಿ ಎಂಬ ಹೆಸರಾಂಕಿತದಿಂದ ಮುಂದುವರೆದರೂ ಅಲ್ಲಿಯ ಆಡಳಿತ ಪ್ರಜೆಗಳಿಂದ ಆರಿಸಲ್ಪಟ್ಟ ಪ್ರತಿನಿಧಿಗಳಿಂದಲೇ ನಡೆಯುತ್ತಿದೆ. ಉದಾಹರಣೆಗೆ ಬ್ರಿಟನ್, ಜಪಾನ್, ನೇಪಾಳ ಹಾಗೂ ಕೆಲ್ಲಿ ರಾಷ್ಟ್ರಗಳು ಹಾಗೂ ಕೆಲವು ಯುರೋಪಿಯನ್ ರಾಷ್ಟ್ರಗಳೇ ಇವಕ್ಕೆ ನಿದರ್ಶನ.

ಈಗಿನ ಶತಮಾನದಲ್ಲಿ ಎರಡು ಜಾಗತಿಕ ಯುದ್ಧಗಳಿಂದ ಆದ ನಷ್ಟ ಕಷ್ಟಗಳನ್ನು ಅನುಭವಿಸಿ ಯಾವುದೇ ರಾಷ್ಟ್ರ ಇನ್ನೊಂದು ರಾಷ್ಟ್ರದ ಮೇಲೆ ತನ್ನ ಯಜಮಾನಿಕೆಯನ್ನು ತೋರಿಸಲು ಹೊರಟರೆ ವಿಶ್ವಸಂಸ್ಥೆಯಂತಹ ಸಂಸ್ಥೆಯ ಮುಖಾಂತರ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಆಗುವ ಅನ್ಯಾಯವನ್ನು ಖಂಡಿಸಿ ಅಂತಹ ರಾಷ್ಟ್ರಕ್ಕೆ ಆರ್ಥಿಕ ದಿಗ್ಬಂದನದಂತಹ ಯುಕ್ತಿಯನ್ನು ಉಪಯೋಗಿಸಿ ಅಂತಹ ದೌರ್ಜನ್ಯವನ್ನು ತಡೆಗಟ್ಟುವ ಪ್ರಯತ್ನಗಳು ನಡೆಯುತ್ತಿವೆ.

ಈ ಶತಮಾನದಲ್ಲಿ ವಿಜ್ಞಾನವು ಹಿಂದಿನ ಶತಮಾನಕ್ಕಿಂತ ಸಾವಿರ ಪಾಲಿನಷ್ಟು ಮುಂದುವರಿದು ಸಂಪರ್ಕ ವ್ಯಾಪಾರ, ತಾಂತ್ರಿಕ ವಿಜ್ಞಾನ, ಸಾರಿಗೆ ವ್ಯವಸ್ಥೆ ಬಹಳಷ್ಟು ಮುಂದುವರಿದಿದೆ. ಭೂ ಗ್ರಹಗಳಿಂದ ಇನ್ನೊಂದು ಗ್ರಹಕ್ಕೆ ಹೋಗಿ ಬರುವಷ್ಟು ಮುಂದುವರಿದಿದೆ. 1800ರಿಂದ 1899ನೇ ಶತಮಾನ ಹಿಂಸೆ, ಮೂಢ ನಂಬಿಕೆಗಳ ಮೇಲೆ ನಿಂತಿದ್ದರೆ, 1901ರಿಂದ 1999ರ ವರೆಗಿನ ಕಾಲದಲ್ಲಿ ಹಿಂಸೆಯನ್ನು ತಡೆಗಟ್ಟುವ, ಮೂಢನಂಬಿಕೆಯನ್ನು ತೊಡೆದು ಹಾಕುವ, ವಿಜ್ಞಾನ ಸಂಶೋಧನೆಗಳಿಂದ ಕತ್ತಲೆಯಲ್ಲಿ ನರಳುತ್ತಿದ್ದ ಮಾನವನ ಕಪ್ಪು ಪರದೆಯನ್ನು ಸರಿಸಿ ಹೊಸ ಬೆಳಕು ಚೆಲ್ಲುವ ಪ್ರಯತ್ನ ನಡೆಯುತ್ತಿದೆ.

ಆದರೆ ಈ ರೀತಿ ಬದಲಾವಣೆಗಳಾಗಿದ್ದರೂ ಮಾನವ ಆಧ್ಯಾತ್ಮಿಕವಾದ ವಿಷಯಗಳಲ್ಲಿ ಹಿಂದಿಗಿಂತ ಕೆಳಮಟ್ಟಕ್ಕೆ ಇಳಿದ್ದಿದ್ದಾನೆ. ಹಿಂದೆ ಇದ್ದ ಆತ್ಮೀಯ ಭಾವನೆ ಮಾಯವಾಗಿದೆ.

ಜೀವನದ ಮೌಲ್ಯ ಕುಸಿದಿದೆ. ಆಧ್ಯಾತ್ಮಿಕ ಭಾವನೆಗಳಿಗೆ ನಿರ್ಲಕ್ಷ್ಯ ತೋರುತ್ತಾ ಬರುತ್ತಿದ್ದಾರೆ. ಒಂದು ದಿಕ್ಕಿನಲ್ಲಿ ವಿಜ್ಞಾನ ಮುಂದೆ ಮುಂದೆ ಹೋಗುತ್ತಿದ್ದರೆ ಆಧ್ಯಾತ್ಮಿಕ ಹಾಗೂ ನೈತಿಕ ವಿಚಾರಗಳಲ್ಲಿ ಹಿಂದೆ ಹಿಂದಕ್ಕೆ ಹೋಗುತ್ತಿದೆ.

ಇಪ್ಪತ್ತೊಂದನೇ ಶತಮಾನದಲ್ಲಿ ವಿಜ್ಞಾನದ ಜೊತೆಯಲ್ಲಿ ಆಧ್ಯಾತ್ಮಿಕ ಹಾಗೂ ನೈತಿಕತೆಯ ಕಡೆಗೂ ಸಹ ಲಕ್ಷ್ಯ ಕೊಡದೇ ಹೋದಲ್ಲಿ ಜನರ ಸ್ವಂತ ಜೀವನ ಕಳಪೆ ಹಾಗೂ ಈ ಶತಮಾನದಲ್ಲಿರುವುದಕ್ಕಿಂತ ಅಧೋಗತಿಗೆ ಹೋಗಿ ಮನ ಶಾಂತಿ ಇಲ್ಲದೆ ಆಗುವ ಪರಿಸ್ಥಿತಿ ಬಂದೀತು. ಮಾನವ ಜೀವನ ಆಧ್ಯಾತ್ಮಿಕ ಹಾಗೂ ವೈಜ್ಞಾನಿಕ ವಿಷಯಗಳ ನಾಣ್ಯದ ಎರಡು ಮುಖಗಳಿದ್ದಂತೆ ಇವರೆಡರಲ್ಲಿ ಯಾವುದಾದರೂ ಒಂದು ಕುಂಠಿತಗೊಂಡರೆ ಮನುಷ್ಯನ ಜೀವನ ಸಮತೋಲನದಲ್ಲಿ ನಡೆಯಲಾರದೆಂದು ಸಂಗಾತಿಯ ಭಾವನೆ.

## ಕುಶಾಲನಗರದಲ್ಲಿ ಹುತ್ತರಿ ಹಬ್ಬ

ಕುಶಾಲನಗರ ಗೌಡ ಯುವಕ ಸಂಘ ಮತ್ತು ಗೌಡ ಸಮಾಜದ ಆಶ್ರಯದಲ್ಲಿ ಪ್ರತಿವರ್ಷ ನಡೆಸುವಂತೆ ಈ ವರ್ಷವೂ ನವಂಬರ್ 24ರಂದು ಸಾರ್ವಜನಿಕವಾಗಿ ಹುತ್ತರಿ ಹಬ್ಬವನ್ನು ಆಚರಿಸಲಾಯಿತು.

ಆ ದಿನ ಸಾಯಂಕಾಲ 6-30ಕ್ಕೆ ಸ್ಥಳೀಯ ಗೌಡ ಸಮಾಜದಲ್ಲಿ ಕುಲ ಬಾಂಧವರು ಸೇರಿ ಕುಲದೇವರು ಶ್ರೀ ವೆಂಕಟ ರಮಣನ ಪೂಜೆಗೈದು ವಾದ್ಯದೊಡನೆ ಮೆರವಣಿಗೆ ಹೊರಟು ಶ್ರೀ ಗಣಪತಿ ದೇವಸ್ಥಾನದಲ್ಲಿ ಪೂಜೆ ಸಲ್ಲಿಸಿ ಕೊಡಗನ ಶ್ರೀ ರಮೇಶರವರ ಮನೆಯ ಆವರಣದಲ್ಲಿ ಸೇರಿ 8 ಗಂಟೆಗೆ ನೆರೆ ಕಟ್ಟಿ ಫಲಹಾರ ವಿತರಣೆಯ ನಂತರ ಅವರ ಗದ್ದೆಯಲ್ಲಿ 9 ಗಂಟೆಗೆ ಗೌಡ ಸಮಾಜದ ಮೇಲ್ವಿಚಾರಕರಾದ ಕುಲ್ಲಚೆಟ್ಟೀರ ಶ್ರೀ ಪೂವಯ್ಯನವರು ಸಂಪ್ರದಾಯಕವಾಗಿ ಕದಿರು ಕುಯ್ದರು. ಸುಮಾರು 600ಕ್ಕೂ ಮಿಕ್ಕಿ ಸೇರಿದ ಸರ್ವರಿಗೂ ಕದಿರನ್ನು ವಿತರಿಸಲಾಯಿತು.

ಮೆರವಣಿಗೆಯ ನೇತೃತ್ವವನ್ನು ಗೌಡ ಯುವಕ ಸಂಘದ ಸದಸ್ಯರ ಸಹಕಾರದೊಂದಿಗೆ ಅಧ್ಯಕ್ಷರಾದ ಪೊನ್ನಚ್ಚನ ಶ್ರೀ ಮೋಹನನವರು ವಹಿಸಿದರು. ಕುಲ ಬಾಂಧವರ ಜೊತೆಗೆ ಕುಶಾಲ ನಗರ ಸ್ಥಳೀಯ ಎಲ್ಲಾ ಜನಾಂಗದವರು ಸಹ ಈ ಕಾರ್ಯಕ್ರಮಕ್ಕೆ ಆಗಮಿಸಿದ್ದು ಈ ನಾಡ ಹಬ್ಬದ ವಿಶೇಷತೆಯಾಗಿತ್ತು.

ವರದಿ : ಕುಂಭಗೌಡನ ಸೋಮಣ್ಣ

ಕೊಡಗು ಸಂಗಾತಿ, ಪಾಕ್ಷಿಕ ಅನ್ನು ಕೊಂಡು ಓದಿರಿ.




✦ ಕೌಂಡಿನ್ಯ

ಧಾರವಾಹಿ -20

ಅದು ಅದು ಎಡತೊರೆಯ ಬಂಗಲೆ !

ರಾತ್ರಿ ಎಂಟು ಗಂಟೆಯ ಸಮಯ.

ಬಂಗಲೆಯ ಬೆಡ್‌ರೂಮಿಗೆ ಅದೇ ತಾನೇ ಬಂದ ಪ್ರಸನ್ನ ಫ್ರಿಡ್ಜ್‌ನಲ್ಲಿ ಇದ್ದ ರಮ್ ಸೀಸೆ, ಸೋಡಾ ಹೊರ ತೆಗೆದನು.

ಅವನ ಮನಸ್ಸು ವ್ಯಗ್ರವಾಗಿದೆ !

ಕೋಪ, ಅಸಹಾಯಕತೆ !

ಈ ಊರಿನಲ್ಲಿ ಏನು ನಡೆಯುತ್ತಿದೆ ಅಂತ ಗೊತ್ತಾಗುತ್ತಿಲ್ಲ. ಸ್ವಲ್ಪ ಹೊತ್ತಿಗೆ ಮೊದಲು ನಡೆದದ್ದು ನೆನಪಾಗುತ್ತದೆ !

ಹುತ್ತದ ಹತ್ತಿರ ರೇವತಿ ನಿಂತಿದ್ದಳು !

ಯಾರೋ ಹಿಂದಿನಿಂದ ಬರುತ್ತಿದ್ದರು !

ನಿಶ್ಯಬ್ದವಾಗಿ ಹತ್ತಿರ ಬಂದಿದ್ದರು.

ರೇವತಿಯ ಕತ್ತಿನ ನರದ ಮೇಲೆ ಹೊಡೆದರು. ಅವಳು ಪ್ರಜ್ಞೆ ತಪ್ಪಿ ನೆಲಕ್ಕೆ ಬಿದ್ದಿದ್ದಳು.

ಪ್ರಸನ್ನ ಜೀಪಿನಲ್ಲಿ ಬರುತ್ತಿದ್ದನು. ಅವನಿಗೆ ದೂರದಿಂದಲೇ ಈ ದೃಶ್ಯ ಕಂಡಿತ್ತು !

ಜೀಪಿನ ವೇಗ ಹೆಚ್ಚಿಸಿದ್ದನು !

ಮುಖದ ಸುತ್ತಾ ಕಂಬಳಿಯನ್ನು ಸುತ್ತಿ ಕೊಂಡಿದ್ದ ವ್ಯಕ್ತಿಯೊಂದು ಮಂಡಿಯೂರಿ ಕುಳಿತ್ತಿತ್ತು !

ಆ ವ್ಯಕ್ತಿ ಏನು ಮಾಡುತ್ತಿದೆ?

ಆದರೆ ಜೀಪಿನ ಶಬ್ದ ಕೇಳಿ ಆ ವ್ಯಕ್ತಿ ಅಲ್ಲಿ ನಿಲ್ಲದೆ ಮರಗಳ ನಡುವೆ ಓಡಿ ಹೋಗಿತ್ತು !

ಪ್ರಸನ್ನ ಬಂದಿದ್ದರಿಂದ ರೇವತಿಯ ಪ್ರಾಣ ಉಳಿದಿತ್ತು !

ಆದರೆ ಆದದ್ದೇನು?

ರೇವತಿ ಅವನನ್ನೇ ಅನುಮಾನಿಸಿದ್ದಳು ! ಬಾಯಿಗೆ ಬಂದಂತೆ ಮಾತಾಡಿದ್ದಳು.

ತಲೆ ಸಿಡಿಯುತ್ತಿರುವ ಅನುಭವ !

ಪ್ರಸನ್ನ ಸಿಗರೇಟು ಹತ್ತಿಸಿದನು.

ಇದನ್ನೆಲ್ಲಾ ಯಾರು ಮಾಡುತ್ತಿದ್ದಾರೆ?

ಆ ಮುಸುಕುಧಾರಿ ಯಾರು?

ಅವನೇಕೆ ರೇವತಿಯನ್ನು ಸಾಯಿಯಲು ಪ್ರಯತ್ನಿಸುತ್ತಿದ್ದ? ಏನು....... ಏನು ನಡೆಯುತ್ತಿದೆ?

ಪ್ರಸನ್ನನಿಗೆ ನೆನಪಾಗುತ್ತಿದೆ !

ಅರೆಹುಚ್ಚ ಅಣ್ಣಂದಿರು !

ನಿಗೂಢ ವ್ಯಕ್ತಿತ್ವದ ಅಕ್ಕ !

ಅರೆ ಹುಚ್ಚ ಭಾವನ ಸಾವು !

'ಇಲ್ಲ.... ಇಲ್ಲ ಈ ರಹಸ್ಯಗಳನ್ನು ನಾನು ಕಂಡು ಹಿಡಿಯಲೇ ಬೇಕು. ಇಲ್ಲದಿದ್ದರೆ ಅದು ಒಂದು ದಿನ ನನ್ನನ್ನೇ ಬಲಿ ತೆಗೆದು ಕೊಳ್ಳಲು ಪ್ರಯತ್ನಿಸುತ್ತದೆ !

ಟೀಪಾಯಿಯ ಮೇಲೆ ರಮ್ ಸೀಸೆ ಇದೆ ! ಅದನ್ನು ಕೈಗೆ ಎತ್ತಿಕೊಂಡನು !

ಇವತ್ತು ಕಂಠಪೂರ್ತಿ ಕುಡಿಯಬೇಕು !

ಪ್ರಸನ್ನ ಸೀಸೆಯ ಮುಚ್ಚಳ ತೆಗೆಯಲು ಕೈ ಹಾಕಿದನು. ಅದೆ ಕೋ ಬೆಚ್ಚಿ ಬಿದ್ದನು.

ಮುಚ್ಚಳ ಸುಲಭವಾಗಿ ಬಂದಿತು.

ಅರೆ..... ಬಾರ್‌ನಿಂದ ತರಿಸಿದ್ದ ರಮ್ ಸೀಸೆಯನ್ನು ನಾನು ಓಪನ್ ಮಾಡಿರಲಿಲ್ಲ !

ಮುಚ್ಚಳಕೆ ಸೀಲ್ ಮಾಡಲಾಗಿತ್ತು !

ಅದು...... ಅದು ಈಗ ತೆರೆದಿದೆ !

ಅದೇಕೋ ಅನುಮಾನ ಬಂದಿತು. ಎದ್ದು ಹೋಗಿ ಫ್ರಿಡ್ಜ್‌ನಲ್ಲಿ ಇದ್ದ ಮತ್ತೊಂದು ರಮ್ ಸೀಸೆ ತೆಗೆದನು.

ಅದರ ಮುಚ್ಚಳ ಸಹ ಸಡಿಲವಾಗಿದೆ ! ಹೇಗೆ...... ಹೇಗೆ ಸಾಧ್ಯ?

ನನಗೆ ಚೆನ್ನಾಗಿ ನೆನಪಿದೆ !

ನೆನ್ನೆಯ ದಿನ ನಗರದಿಂದ ಎರಡು ಫುಲ್ ಬಾಟಲ್ ರಮ್ ಸೀಸೆ ತಂದಿದ್ದೆ !

ನೆನ್ನೆ ನಾನು ರಮ್ ಕುಡಿದಿರಲಿಲ್ಲ !

ಬಾರ್‌ನಿಂದ ತಂದಿದ್ದಾಗ ಈ ಬಾಟಲ್‌ಗಳನ್ನು ಸೀಲ್ ಮಾಡಲಾಗಿತ್ತು !

ಈಗ ಅದನ್ನು ತೆರೆದವರು ಯಾರು?

ಸೀಸೆಗಳನ್ನು ನೋಡಿದನು.

ರಮ್ ಇದ್ದಷ್ಟೇ ಇದೆ !

ಮುಚ್ಚಳ ತೆಗೆದು ಅದನ್ನು ತನ್ನ ಮೂಗಿನ ಹತ್ತಿರ ಹಿಡಿದು ನೋಡಿದನು.

ಬೇರೆ ವಾಸನೆ ಬರುತ್ತಿಲ್ಲವಲ್ಲ !

ಅವನಿಗೆ ಭಯದೊಂದಿಗೆ ಅನುಮಾನ ಸಹ ಬಂದಿತು. ಬೇಡ..... ಬೇಡ ಈ ರಮ್ ಕುಡಿಯುವುದು ಬೇಡ !

ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ !

ಭಯ, ಆತಂಕ, ಗಾಬರಿ !

ಯಾರೋ ನನ್ನನ್ನು ಸಾಯಿಸಲು ಪ್ರಯತ್ನಿಸುತ್ತಿದ್ದಾದರೆ, ಈ ರಮ್‌ನಲ್ಲಿ ಏನು ಬೆರೆಸಿರಬಹುದು?

ಮಾರನೆಯ ದಿನವೇ ಪ್ರಸನ್ನ ಎರಡು ರಮ್ ಸೀಸೆಗಳನ್ನು ಮೈಸೂರಿನಲ್ಲಿರುವ ಲ್ಯಾಬಿಗೆ ತೆಗೆದುಕೊಂಡು ಹೋಗಿ ಪರಿಶೀಲನೆಗೆಂದು ಕೊಟ್ಟನು.

ಫಲಿತಾಂಶ ಹೊರ ಬಂದಿತು.

ರಮ್‌ನಲ್ಲಿ ಭಾರೀ ಪ್ರಮಾಣದಲ್ಲಿ ಮಿಥೇಲ್ ಆಲ್ಕೋಹಾಲ್‌ನ್ನು ಬೆರೆಸಲಾಗಿತ್ತು !

ಮಿಥೇಲ್ ಆಲ್ಕೋಹಾಲ್ ರಮ್‌ನಲ್ಲಿ ಬೆರೆಸಿದರೆ ರುಚಿ ಮತ್ತು ವಾಸನೆಯಲ್ಲಿ ವ್ಯತ್ಯಾಸ ಗೊತ್ತಾಗುವುದಿಲ್ಲ.

ಮಿಥೇಲ್ ವಿಷಕಾರಿ !

ಇದರ ಪ್ರಮಾಣ ಅಧಿಕವಾದರೆ ಮನುಷ್ಯನಿಗೆ ಸಾವು ಬರುತ್ತದೆ !

ಗಡ ಗಡನೆ ನಡುಗಿದನು ಪ್ರಸನ್ನ !

9ನೇ ಪುಟಕ್ಕೆ

ಇಲ್ಲಿಯವರೆಗೆ.........

ಸಂಪಿಗೆ ಪುರದ ಎಡತೊರೆಯ ಬಂಗಲೆಯಲ್ಲಿ ವ್ಯಕ್ತಿಯೊಂದು ಪ್ರಸನ್ನನನ್ನು ಸಾಯಿಸಲು ಪ್ಲಾನ್ ಮಾಡುತ್ತದೆ. ಹುತ್ತದ ಹತ್ತಿರ ರೇವತಿ ನಿಂತಿದ್ದಾಗ ಹಿಂದಿನಿಂದ ಬಂದ ಮುಸುಕುಧಾರಿ ಆಕ್ರಮಣ ಮಾಡುತ್ತದೆ. ರೇವತಿಗೆ ಪ್ರಜ್ಞೆ ಬಂದಾಗ ಪ್ರಸನ್ನ ಕಾಣುತ್ತಾನೆ. ರೇವತಿಗೆ ಅವನ ಮೇಲೆ ಇದ್ದ ಅನುಮಾನ ಮತ್ತಷ್ಟು ದೃಢವಾಗುತ್ತದೆ.

ಮುಂದೆ ಓದಿ..........

# ಹತ್ತು ಕುಟುಂಬ ಹದಿನೆಂಟು ಗೋತ್ರಗಳ ಬಗ್ಗೆ ಒಂದು ಇಣುಕು ನೋಟ

ಹದಿನೆಂಟು ಗೋತ್ರ ಒಂದು ನಿರ್ದಿಷ್ಟ ಸಂಖ್ಯೆ. ಆದ್ದರಿಂದ ಇದು ಹತ್ತು ಕುಟುಂಬ ಎಂಬ ಹೇಳಿಕೆಯಂತೆ ಕ್ಲಿಷ್ಟಕರ ಹೇಳಿಕೆಯಲ್ಲ. ಗೋತ್ರವೆಂದರೆ ಹಲವಾರು ಕುಟುಂಬಗಳನ್ನೊಳಗೊಂಡ ಒಂದು ಜನ ಸಮೂಹ. ಗೋತ್ರದ ಪರ್ಯಾಯ ಪದವಾದ 'ಬಳಿ' (ರಳ ರೂಪ) ಒಂದು ಹಳಗನ್ನಡ ಪದ. ಅದಕ್ಕೆ ಮಾರ್ಗ ಮತ್ತು ವಂಶಗಳೆಂಬ ಅರ್ಥಗಳಿವೆ.

ಒಂದು ಗೋತ್ರಕ್ಕೆ ಸೇರಿದವರು ಹಿಂದೆ ರಕ್ತ ಸಂಬಂಧಿಗಳಾಗಿದ್ದರೆಂದು ತಿಳಿದು ಬಂದಿದೆ. ಆದ್ದರಿಂದ ಸ್ವಗೋತ್ರ ವಿವಾಹ ನಿಷಿದ್ಧವಾಗಿದೆ. ಆದರೆ ಇತ್ತೀಚೆಗೆ ಈ ನಿಷೇಧವನ್ನು ಕಟ್ಟುನಿಟ್ಟಾಗಿ ಅನುಸರಿಸುವುದಿಲ್ಲ. ಸ್ವಗೋತ್ರದ ಹೊರಗೆ ಯಾವ ಗೋತ್ರದ ಕನ್ಯೆಯನ್ನು ವಿವಾಹವಾಗಬಹುದೆಂದಿದ್ದರೂ ಕೆಲವೊಂದು ಗೋತ್ರದ ಗಂಡುಗಳಿಗೆ ಕೆಲವೊಂದು ಗೋತ್ರದ ಕನ್ಯೆಯರು ಮಾತ್ರ ಹೊಂದಿಕೆಯಾಗುತ್ತಾರೆಂಬ ನಂಬಿಕೆ ನಮ್ಮವರಲ್ಲಿದೆ. ಆದ್ದರಿಂದ ಮದುವೆ ನಿಶ್ಚಯಕ್ಕೆ ಬಹಳಷ್ಟು ಮುಂಚಿತವಾಗಿ ಕನ್ಯೆಯ ಗೋತ್ರದ ಬಗ್ಗೆ ವಿಚಾರಿಸಿ ಖಾತ್ರಿಮಾಡಿಕೊಳ್ಳುತ್ತಾರೆ.

ಬ್ರಾಹ್ಮಣರಲ್ಲಿ ಗೋತ್ರಗಳು ಋಷಿಗಳ ಹೆಸರಿನಲ್ಲಿವೆ. ಉದಾಹರಣೆಗೆ ವಶಿಷ್ಠ ಗೋತ್ರಕ್ಕೆ ಸೇರಿದವರು ವಶಿಷ್ಠ ಋಷಿಯನ್ನು ತಮ್ಮ ಗೋತ್ರದ ಮೂಲ ಪುರುಷನೆಂದು ನಂಬುತ್ತಾರೆ. ಬ್ರಾಹ್ಮಣರಲ್ಲಿ ಅಭಿವಾದನ ನಮಸ್ಕಾರ ಒಂದು ಪರಿಚಯಾತ್ಮಕ ನಮಸ್ಕಾರವಾಗಿದೆ. ಆಗ ಅಭಿನಂದಿಸುವಾತ ತನ್ನ ವೇದ ಶಾಖೆ, ಸೂತ್ರ, ಗೋತ್ರ, ಪ್ರವರ ಮತ್ತು ತನ್ನ ಹೆಸರನ್ನು ಹೇಳಿ ನಮಸ್ಕರಿಸುತ್ತಾನೆ. ಪ್ರೊ. ಟಿ. ಕೇಶವಭಟ್ ತಮ್ಮ "ಹವ್ಯಕ ಶೋಭಾನೆಗಳು" ಎಂಬ ಗ್ರಂಥದಲ್ಲಿ "ಗೋತ್ರ" ಎಂಬುದು ವಂಶದ ಮೂಲ ಪುರುಷನಾದ ಋಷಿಯ ಹೆಸರನ್ನು ಸೂಚಿಸುತ್ತದೆ. ಗೋತ್ರ ಪ್ರವರ್ತಕರಾದ ಋಷಿಗಳು 40 ಮಂದಿ. ಅಂದರೆ ನಲ್ವತ್ತು ಬಗೆಯ ಗೋತ್ರಗಳಿವೆ ಎಂದ ಹಾಗಾಯಿತು. ಇವುಗಳಲ್ಲಿ ಎಂಟು ಮಂದಿ ಋಷಿಗಳ ಹೆಸರಿನ ಗೋತ್ರಗಳು ಪ್ರಮುಖವಾಗಿದೆ. ಯಾವುವೆಂದರೆ :

"ಜಮದಗ್ನಿರ್ಭರ ದ್ವಾಜೋ ವಿಶ್ವಾಮಿತ್ರಾತ್ರಿಗೌತಮಾಃ
ವಶಿಷ್ಠ ಕಾಶ್ಯಪಾಗಸ್ತ್ಯ ಮುನಯೋ ಗೋತ್ರಕಾರಿಣಃ"

ಎಂದು ಹೇಳಿದ್ದಾರೆ.

ಗೌಡ ಸಾರಸ್ವತರಲ್ಲಿ, ಹತ್ತು ಗೋತ್ರಗಳಿವೆ. ಅವುಗಳು : ಭಾರದ್ವಾಜ, ಕೌಶಿಕ, ವತ್ಸ್ಯ, ಕೌಂಡಿನ್ಯ, ಕಶ್ಯಪ, ವಶಿಷ್ಠ, ಜಮದಗ್ನಿ, ವಿಶ್ವಾಮಿತ್ರ, ಗೌತಮ ಮತ್ತು ಅತ್ರಿ.

ನಮ್ಮಲ್ಲಿ ಪ್ರಚಾರದಲ್ಲಿರುವ ಹದಿನೆಂಟು ಗೋತ್ರಗಳು ನಮ್ಮ ಹಿಂದಿನ ಧಾರ್ಮಿಕ ಪರಂಪರೆ ಅಥವಾ ನಮ್ಮ ಮೂಲ ನೆಲೆಗಳನ್ನು ಸೂಚಿಸುವಂತೆ ಭಾಸವಾಗುತ್ತದೆ. ಇಂದು ಹದಿನೆಂಟು ಗೋತ್ರಗಳಲ್ಲಿ ಕೆಲವು ತಮ್ಮ ಅಸ್ತಿತ್ವವನ್ನು ಕಳೆದು ಕೊಂಡಿರಬಹುದು. ಬ್ರಾಹ್ಮಣರಲ್ಲಿ ಗೋತ್ರ ಮತ್ತು ಪ್ರವರ ಅವರ ಪರಿಚಯವನ್ನು ನಿರೂಪಿಸಿದರೆ ನಮ್ಮಲ್ಲಿ ಕುಟುಂಬ ಮತ್ತು ಗೋತ್ರ ನಮ್ಮ ಪರಂಪರೆಯ ಪರಿಚಯ ಮಾಡಿ ಕೊಡುತ್ತವೆ. ಕೆಲವು ಗೋತ್ರಗಳು ತಮ್ಮ ನಿಕಟ ಬಾಂಧವ್ಯವನ್ನು ಸೂಚಿಸುತ್ತವೆ. ಉದಾಹರಣೆಗೆ ಕಬರ್‌ಗೋತ್ರ ಮತ್ತು ನಾಯರ್ ಗೋತ್ರಗಳನ್ನು ಕೂಡು ಗೋತ್ರಗಳೆಂದು ಕರೆಯಲಾಗುತ್ತದೆ.

ಒಕ್ಕಲಿಗರ ವಿವಿಧ ಪಂಗಡಗಳಲ್ಲಿ ಗೋತ್ರಗಳ ಸಂಖ್ಯೆ ಏಕರೂಪತೆಯನ್ನು ಹೊಂದಿರುವುದಿಲ್ಲ. ಅವರಲ್ಲಿ ಯಾವುದೇ ಪಂಗಡದವರಿಗೆ ಹದಿನೆಂಟು ಗೋತ್ರಗಳಿರುವುದಿಲ್ಲ; ಅದಲ್ಲದೆ ಅವರ ಗೋತ್ರಗಳ ಹೆಸರುಗಳು ಮತ್ತು ನಮ್ಮ ಗೋತ್ರಗಳ ಹೆಸರುಗಳಲ್ಲಿ ಭಿನ್ನತೆ ಎದ್ದು ಕಾಣುತ್ತದೆ.

ಕೆಲವು ಶಾಸನಗಳಲ್ಲಿ ಕಂಡು ಬರುವ ಹದಿನೆಂಟು "ಸಮಯ"ಗಳಿಗೂ ನಮ್ಮ ಹದಿನೆಂದು ಗೋತ್ರಗಳಿಗೂ ಏನಾದರೂ ಸಂಬಂಧವಿದಿಯೋ ಶೋಧಿಸಬೇಕಾಗಿದೆ.

ಸಮಾಪ್ತಿ : "ಹತ್ತು ಕುಟುಂಬ ಹದಿನೆಂಟು ಗೋತ್ರ" ಎಂಬ ಹೇಳಿಕೆಯನ್ನು ಯಾವ ಕಾಲದಲ್ಲಿ ಯಾವ ಚತುರಮತಿ ರೂಪಿಸಿ ಬಳಕೆಗೆ ತಂದನೋ ಅರಿಯದಾಗಿದೆ. ಅಂದಿನಿಂದ ಈ ತನಕ ನಾವಿದನ್ನು ಪದೇ ಪದೇ ಬಳಸುತ್ತಿದ್ದರೂ ಇದೊಂದು ಕ್ಲೀಷೆ ಅನ್ನಿಸದೆ ನಿತ್ಯ ನೂತನವಾಗಿ ಕಂಗೊಳಿಸುತ್ತದೆ.

ಆಧಾರ ಗ್ರಂಥಗಳು

೧. ಹವ್ಯಕರ ಶೋಭಾನೆಗಳು - ಪ್ರೊ. ಟಿ. ಕೇಶವಭಟ್ಟ

೨. ಸಂಶೋಧನ ತರಂಗ - ಡಾ. ಎಂ. ಚಿದಾನಂದ ಮೂರ್ತಿ.

೩. ಗೌಡ ಸಾರಸ್ವತ ಸಮಾಜದ ಕೀರ್ತಿಶಿಖರಗಳು - ಶಾಲಿನಿ ಪ್ರಭು.

ಕುಲ್ಲಚನ ಕಾರ್ಯಪ್ಪ, ಕುಂಬಳದಾಳು ಗ್ರಾಮ

---

## ಅಮ್ಮ

ಅಮ್ಮ ಎನ್ನುವ ನುಡಿಯಲ್ಲಿ
ಆನಂದ ಅಡಗಿಹುದಿಲ್ಲಿ
ಇರುವೆವು ಎಂದುತಾಯಿ ಜತೆಯಲ್ಲಿ
ಈನುಡಿ ಸತ್ಯ ಜಗದಲ್ಲಿ
ಉಸಿರನ್ನು ನೀಡಿ ಜೀವವ ಕೊಟ್ಟ
ಊಟವ ನೀಡಿ ಬೆಳೆಸಿದ ನಿಮ್ಮ
ಋಣವನ್ನು ಹೇಗೆ ತೀರಿಸಲಮ್ಮ
ಋಣವನ್ನು ಹೇಗೆ ತೀರಿಸಲಮ್ಮ
ಎಂದು ನಮ್ಮ ನೆರಳು ನೀವಮ್ಮ,
ಏತಕ್ಕೆ ಜಾತಿಯ ಜಗಳವು ನಮ್ಮಲ್ಲಿ ಅಮ್ಮ
ಐಕ್ಯತೆಗಾಗಿ ಶ್ರಮಿಸುವೆವಮ್ಮಾ
ಒಂದೇ ಎಲ್ಲರು ನಾಡಿನ ಜನರು
ಓದಲು ಬರೆಯಲು ಕಲಿಯುವ ಎಲ್ಲರು
ಔದಾರ್ಯದಿ ಗುರು ಹಿರಿಯರಿಗೆ ತಲೆ ಬಾಗುವೆವಮ್ಮ
ಅಂದು ನೀನು ನೀಡಿದ ಜನ್ಮ
ಅಃ ತಾಯಿಯೇ ವಿಶ್ವದ ದೇವತೆಯಮ್ಮ

ಪಡಿಕಲ್ ಸುನಿತಾ ಚಿಣ್ಣಪ್ಪ, ಕೈಕೇರಿ ಗ್ರಾಮ

ಏರಿಗೆ, ಕೋಣ ನೀರಿಗೆ" ಎಳೆದಾಡುವಂತಿದ್ದ ಸಮಯದಲ್ಲಿ ಶ್ರೀ ಕೊಂಪುಳಿರ ಸೋಮಪ್ಪನವರು ಎದೆಗುಂದದೆ ಎಲ್ಲರನ್ನು ಸಮರ್ಥವಾಗಿ ಒಂದುಗೂಡಿಸಿ ಕುಶಾಲನಗರದಲ್ಲಿ ಸಮಾಜ ನಿರ್ಮಿಸಿ ಮುನ್ನೆಡದ ವಿಚಾರ 33% ಮಹಿಳಾ ಮೀಸಲಾತಿಯ ಉಪಯೋಗ, ದಾರಿ ತಪ್ಪುವ ಸಮಯದಲ್ಲಿ ಗೌಡ ಸಮಾಜ ಖಂಡಿತ ಮುಂದೆ ಬರುತ್ತದೆ ಮತ್ತು ಒಗ್ಗೂಡಿ ಕೆಲಸ ಮಾಡಿದರೆ ಸಮರ್ಥವಾದ ಸಂಘಟನೆಗೆ ಸಾಧ್ಯವೆಂದರು.

ಇನ್ನೊಬ್ಬ ಮುಖ್ಯ ಅತಿಥಿ ಪಟ್ಟಡ ಪ್ರಭಾಕರನವರು ನಮ್ಮ ಜನಾಂಗ ನಡೆದು ಬಂದ ದಾರಿ, ಸಂಘ ಸಂಸ್ಥೆಗಳ ಬಗ್ಗೆ, ಶೃಂಗೇರಿಯಿಂದ ಐಗೂರು ಸೀಮೆ ನಂತರ ಕೊಡಗಿನಲ್ಲಿ ನಿಂತದ್ದರ ಬಗ್ಗೆ, ಜನಾಂಗಕ್ಕೆ ಯಾವುದೋ ಒಂದು ದೋಷವಿರುವ ಬಗ್ಗೆ; ರಾಜಕೀಯದಲ್ಲಿ ಸ್ವಲ್ಪದರಲ್ಲಿ ತಪ್ಪಿದ ಅವಕಾಶವನ್ನು ಗೌಡ ಸಮಾಜ ಸದುಪಯೋಗ ಪಡಿಸಿಕೊಳ್ಳುವಲ್ಲಿ ವಿಫಲವೆಂದೂ ಅಖಿಲ ಭಾರತದಲ್ಲಿ ಇರುವ ಎಲ್ಲಾ ಅರೆಭಾಷಿಕರ ಸಮಾಜಗಳು, ವಿದ್ಯಾ ಸಂಘಗಳು, ಅಭಿವೃದ್ಧಿ ಸಂಘಗಳು, ಸಾಂಸ್ಕೃತಿಕ ಅಕಾಡೆಮಿ, ಸಾಂಸ್ಕೃತಿಕ ಸಮಿತಿ, ಮಹಿಳಾ ಒಕ್ಕೂಟಗಳು, ಗೌಡ ಯುವಶಕ್ತಿಗಳ ಅಧ್ಯಕ್ಷರುಗಳು ಇವರುಗಳೆಲ್ಲಾ ಮಡಿಕೇರಿಯಲ್ಲಿರುವ ಸಮಾಜದ ನೇರ ಆಡಳಿತಕ್ಕೆ ಒಳಪಡುವಂತೆಯೂ, ಅವರುಗಳೂ ಉಪಾಧ್ಯಕ್ಷರ ಸ್ಥಾನದಲ್ಲಿ ಕಾರ್ಯ ನಿರ್ವಹಿಸುವಂತೆಯೂ ಒಂದು ಕೇಂದ್ರೀಯ ಗೌಡ ಸಮಾಜದ ನಿರ್ಮಾಣ ಮತ್ತು ಅದರ ಕೈ ಕೆಳಗೆ ಒಗ್ಗೂಡಿ ಸೇವೆ ನೀಡಿ ಒಂದು ಬಲಿಷ್ಠ ಸಮಾಜದ ನಿರ್ಮಾಣವಾಗಬೇಕೆಂದು ಕರೆ ನೀಡಿದರು. ಮತ್ತು ಮುಂದುವರಿದು ಭಾಷೆ ಮತ್ತು ಉಡುಪು ಹಾಗೂ ಸಂಸ್ಕೃತಿ ಸಂಪ್ರದಾಯಗಳ ಜೊತೆಗೆ ನವ ಯುವಕರು 21ನೇ ಶತಮಾನಕ್ಕೆ ರವಾನಿತವಾಗುವುದಲ್ಲದೆ ಅಂತಹ ಬಲಿಷ್ಠ ಸಮಾಜ ನಿರ್ಮಾಣವಾಗಲೇ ಬೇಕೆಂದರು.

ಜನಾಂಗದ ಐಕ್ಯತೆಗೆ, ಅಭಿವೃದ್ಧಿಗೆ ದಾರಿ ದೀಪವಾಗಿರುವ ಪತ್ರಿಕಾ ಮಾಧ್ಯಮ ಅದರ ಉಳಿವಿಗಾಗಿ ವಿನಂತಿಸಿದರಲ್ಲದೆ ಪ್ರತಿಯೊಬ್ಬರು ಒಲೆಗೊಂದರಂತೆ ಕೊಂಡು ಓದಿ ಪ್ರೋತ್ಸಾಹಿಸ ಬೇಕೆಂದು ಸಹ ಮನವಿ ಮಾಡಿದರು.

ಕೊಡಗಿನ ಪದ್ಧತಿಯಂತೆ ಊಟದ ವ್ಯವಸ್ಥೆ ಚೆನ್ನಾಗಿತ್ತು. ತಾಲ್ಲೂಕಿನ ಬಾಂಧವರ ಮತ್ತು ಸ್ವಜನ ಶೀಲರಾದ ನಾಡಿನವರ ಸಹಾನುಭೂತಿಯಿಂದ. ಸದ್ಯದಲ್ಲಿಯೇ ಬೃಹತ್ ಕಲ್ಯಾಣ ಮಂಟಪದ ಚಿಂತನೆಯಲ್ಲಿರುವ ಆಡಳಿತ ಮಂಡಳಿಯವರ ಆಶೋತ್ತರಗಳೆಲ್ಲವೂ ಶೀಘ್ರವಾಗಿ ನೆರವೇರಲೆಂಬುದಾಗಿ ಕೊಡಗು ಸಂಗಾತಿ ಮನ ಪೂರ್ವಕವಾಗಿ ಜನಾಂಗದ ಪರವಾಗಿ ಶುಭವನ್ನು ಈ ಸಂದರ್ಭದಲ್ಲಿ ಹಾರೈಸುತ್ತದೆ.

ಜೈ ಗೌಡ ಬಾಂಧವರೇ

ಸಂಗಾತಿ ವರದಿ.

## 1837ರ ಅಮರಸುಳ್ಯ ಸ್ವಾತಂತ್ರ್ಯ ದಂಗೆಯಲ್ಲಿ ಭಾಗವಹಿಸಿದ ಮಹಾತ್ಮರು

**ಗಲ್ಲಿಗೇರಿಸಲ್ಪಟ್ಟು ಹುತಾತ್ಮರಾದವರು :** ಮಡಿಕೇರಿಯಲ್ಲಿ ಸುಬೇದಾರ ಗುಡ್ಡೆಮನೆ ಅಪ್ಪಯ್ಯಗೌಡ, ಮಂಗಳೂರಿನಲ್ಲಿ : ಪುಟ್ಟಬಸವ, ಬಿಕ್ರನಕಟ್ಟೆಯಲ್ಲಿ : ಲಕ್ಷ್ಮಪ್ಪ ಬಂಗರಸ, ವೀರಣ್ಣ ರೈ, ಉಪ್ಪಿನಂಗಡಿಯ ಮಂಜ.

ಹೋರಾಡುತ್ತಾ ಬ್ರಿಟಿಷರಲ್ಲಿ ಬಲವಿಲ್ಲ, ಮುತ್ತಿಗೆ ಹಾಕಿ, ಹೋರಾಟ ನಿಲ್ಲಿಸಬೇಡಿ, ವೀರಾವೇಶದಿಂದ ಹೋರಾಡಿ ಎಂದು ಸಿಂಹ ಗರ್ಜನೆಯೊಂದಿಗೆ ವೀರಸ್ವರ್ಗ ಪಡೆದ ಕುರುಂಜಿ ಸುಬ್ಬಯ್ಯಗೌಡ.

**ಆಜೀವ ಪರ್ಯಂತ ಶಿಕ್ಷೆಗೆ ಒಳಗಾದವರು :** ಕುಕನೂರು ಚಿನ್ನಯ್ಯ ಮತ್ತು ಪೆರಾಜೆ ಕೃಷ್ಣಯ್ಯ

**ಕಠಿಣ ಶಿಕ್ಷೆಗೊಳಗಾದ ವೀರರು :** ಹುಲಿಕಡಿದ ನಂಜಯ್ಯ, ಕೆದಂಬಾಡಿ ರಾಮಯ್ಯಗೌಡ, ಕೂಜುಗೋಡು ಅಪ್ಪಯ್ಯ, ಕೂಜುಗೋಡು ಮಲ್ಲಪ್ಪ, ಮಣಿಯನ ರಂಗಪ್ಪ, ಪೆರಾಜೆಯ ಊರಣ್ಣ ರೈ, ಪಟೇಲ ಶಂಕರನಾರಾಯಣ, ಮಹೇಗಾರ ನಾರ್ಣಪ್ಪ, ಅಮೀನ್ ವೆಂಕಟ, ಷೇಕ್, ಕುಂಚಡ್ಕ ತಿಮ್ಮ, ಕುಡೆಕಲ್ಲು ಪುಟ್ಟ, ದೇರಾಜೆ ಬಚ್ಚ, ಗುಡ್ಡದ ಸುಬ್ಬಪ್ಪ, ಮಡಿಯಾಲ ತಿಮ್ಮ, ಹೋಮಯ ತಿಮ್ಮ, ಮಾದಯ್ಯ, ಕುರ್ತುಕುಡಿಯ, ಚೆಟ್ಟಿಕುಡಿಯ, ಮಂಡಿರ ಉತ್ತು.

**ಜೈಲಿನಲ್ಲಿ ಸತ್ತವರು :** ಬಂಗಾರಿ, ಮುಂಗಣ್ಣ, ಪುಟ್ಟಯ್ಯ, ಖೈದಿ ನಂಬ್ರ ನಾಲ್ಕು.

ಕೃಪೆ : ಅಮರಸುಳ್ಯ ಸ್ವಾತಂತ್ರ್ಯ ಸಮರ

ವಿ. ಸೂ. : ಈ ಮೇಲ್ಕಾಣಿಸಿದ ಹೆಸರಿನ ಈಗಿನ ಮನೆಸ್ಥಾನದವರಲ್ಲಿ ಸಂಗಾತಿಯ ಪ್ರಾರ್ಥನೆ. ತಾವು ದಯವಿಟ್ಟು ಇವರುಗಳ ಫೋಟೋಗಳು ಇದ್ದಲ್ಲಿ ಕಳುಹಿಸಿಕೊಡಿ. ಇಲ್ಲವಾದಲ್ಲಿ ಅವರುಗಳನ್ನು ಹೋಲುವ ಆಗಿನ ಕಾಲದ ಉಡುಪಿನೊಂದಿಗೆ ಊಹಿಸಿ ರೇಖಾಚಿತ್ರ ಮಾಡಿ ಕಳುಹಿಸಿರಿ. ಅವರುಗಳ ಬಗ್ಗೆ ಹೆಚ್ಚಿನ ಮಾಹಿತಿ, ಇದ್ದರೆ ಸಂಗಾತಿಗೆ ಕಳುಹಿಸಿ. ಓದುಗರು ನಮ್ಮ ಹಿರಿಯರ ವೀರಗಾಥೆಯನ್ನು ಅರಿಯುವಂತಾಗಲೆಂಬುದೆ ನಮ್ಮ ಅಪೇಕ್ಷೆ ಆಗಿದೆ. ಜನಾಂಗದ, ಓದುಗರ ಸಹಕಾರವನ್ನು ಈ ನಿಟ್ಟಿನಲ್ಲಿ ನಾವು ಕೋರುತ್ತೇವೆ.

- ಸಂಪಾದಕ

**"ಈ ಮೇಲ್ಕಾಣಿಸಿದ ಎಲ್ಲಾ ನಮ್ಮ ವೀರರಿಗೆ ಈ ಶತಮಾನದ ಕೊನೆಯ ನಮನಗಳು"**

---

## ಸಂಗಾತಿಯ ಮೌಲ್ಯಗಳು

ಸತ್ಯನಿಷ್ಠತೆ ಹಾಗೂ ಪಾರದರ್ಶಕತೆ

ಕಾಳಜಿ ಹಾಗೂ ಸೌಜನ್ಯತೆ

ಉಪಕ್ರಮಣತೆ ಹಾಗೂ ನವೀನತೆ

# ಅರೆಭಾಷಿಕ ಗೌಡ ಶ್ರಮಜೀವಿಗಳಿಂದ ಪಿರಿಯಾ ಪಟ್ಟಣದಲ್ಲೊಂದು ಪುಟ್ಟಗೌಡ ಸಮುದಾಯ ಭವನ ನಿರ್ಮಾಣ





**ಕೊಡಗು ಗೌಡ ಸಮಾಜದ ವಾರ್ಷಿಕ ಮಹಾಸಭೆ**

ದಿನಾಂಕ 28-11-1999ರ ಭಾನುವಾರ ಕೊಡಗು ಗೌಡ ವಿದ್ಯಾಭಿವೃದ್ಧಿ ಸಂಘದ ಆಶ್ರಯದಲ್ಲಿ ವಾರ್ಷಿಕ ಮಹಾಸಭೆಯು ಬಹಳ ವಿಜೃಂಭಣೆಯಿಂದ ಚೊಕ್ಕವಾಗಿ ನಡೆಯಿತು. ಹೊಗೆಸೊಪ್ಪು ಬೆಳೆಯ ತವರೂರು, ಭತ್ತದ ಕಣಜವು, ಶುಂಠಿ ಕೃಷಿಕರು, ಕಾಫಿ ಬೆಳೆಗಾರರು, ಸರ್ಕಾರಿ ನೌಕರರು ಇರುವ ಸ್ಥಳದಲ್ಲಿ ಕೊಡಗಿನಿಂದ ಹೊರಬಂದು ಪಿರಿಯಾ ಪಟ್ಟಣ ತಾಲೂಕಿನಲ್ಲಿ ನೆಲೆಸಿ ಜನಾಂಗದ ಬಂಧುಗಳೆಲ್ಲರು ಸೇರಿ ಕಟ್ಟಿಸಿಕೊಂಡ ಗೌಡ ಸಮುದಾಯ ಭವನವು ತಲೆಯೆತ್ತಿ ನಿಂತಿರುವುದು ನಿಜಕ್ಕೂ ಹೆಮ್ಮೆಯ ವಿಚಾರವಾಗಿದೆ.

ಏಳು ಚೆದುರಳತೆಯಲ್ಲಿ ಕಟ್ಟಿದ ಈ ಸಭಾ ಮಂಟಪವು ಸುಮಾರು ಒಂದು ಎಕರೆಗಿಂತ ಹೆಚ್ಚಿನ ಸ್ಥಳವನ್ನು ತನ್ನದಾಗಿರಿಸಿ ಕೊಂಡಿದೆ. ಈ ಸ್ಥಳದ ಅಭ್ಯುದಯ ಕಟ್ಟಡಕ್ಕಾಗಿ, ತನ್ನ ಸಂಸ್ಕೃತಿ ಮತ್ತು ಭಾಷೆಯನ್ನು ಉಳಿಸುವ ನಿಟ್ಟಿನಲ್ಲಿ ದಿಟ್ಟ ಹೆಜ್ಜೆ ಇಟ್ಟ ಈ ಪಿರಿಯಾಪಟ್ಟಣ ತಾಲೂಕಿನಲ್ಲಿ ನೆಲೆಸಿದ ಅರೆಭಾಷಿಕರ ಆಸೆ ಆಕಾಂಕ್ಷೆಗಳೆಲ್ಲವೂ ಅಭೂತಪೂರ್ವವಾಗಿದೆ.

ಬೆಳಿಗ್ಗೆ 11-40ಕ್ಕೆ ಕುಮಾರಿ ಕೂಡಕಂಡಿ ಗ್ರಂಥಾ ನಿಶಾಪತಿಯವರಿಂದ ಪ್ರಾರ್ಥನೆಯಾಯಿತು. ಸ್ವಾಗತ, ಸುಸ್ವಾಗತ ಗೀತೆಯನ್ನು ಕೊರಂಬಡ್ಕ ದಿವ್ಯಾ ಬಿದ್ದಪ್ಪನವರು ಹಾಡಿದರು. ಸೋಮೆಟ್ಟಿರ ದೇವಯ್ಯನವರು ನೆರೆದವರನ್ನು ಸ್ವಾಗತಿಸಿದರು. ಮೃತಪಟ್ಟ ಸಂಘದ ಸದಸ್ಯರಿಗೆ ಎರಡು ನಿಮಿಷಗಳ ಕಾಲ ಸಂತಾಪ ಸೂಚನೆಯನ್ನು ನೀಡಲಾಯಿತು. ಆಡಳಿತ ಸಭೆಯ ವರದಿಯನ್ನು ಓದುವುದು, ಅಂಗೀಕರಿಸುವುದು, ಹಿಂದಿನ ವಾರ್ಷಿಕ ಸಭೆಯ ನಡಾವಳಿಯ ಬಗ್ಗೆ ಓದಿ ವಿವರ ತಿಳಿಸಿದ್ದಲ್ಲದೆ 1992ರಿಂದ 1999ರ ಸಾಲಿನ ಆಡಿಟ್ ವರದಿ, ಉದ್ದೇಶಿತ ಸಂಘದ ಕಾರ್ಯಕ್ರಮ ಬಗ್ಗೆ ಚರ್ಚಿಸಿ, ಒಂದಿಬ್ಬರು ಹೊಸ ಕಾರ್ಯಕಾರಿ ಮಂಡಳಿಗೆ ನೇಮಕವಾಗುವುದರ ಮೂಲಕ ಹಿಂದಿನ ಹಳೇ ಕಾರ್ಯಕಾರಿ ಮಂಡಳಿಯೇ ಮುಂದುವರಿಯುವಂತೆ ಮಹಾಸಭೆ ಒಪ್ಪಿಗೆಯಿತ್ತಿತು. ಅಧ್ಯಕ್ಷರ ಅನುಮತಿ ಮೇರೆ ಇತರ ವಿಚಾರಗಳನ್ನು ಚರ್ಚಿಸಿ ಅಧ್ಯಕ್ಷರ ಭಾಷಣದ ಮೂಲಕ ಸಭೆಗೆ ವಂದನಾರ್ಪಣೆಯನ್ನು ನಿರ್ದೇಶಕರಾದ ಶ್ರೀ ಹುದೇರಿ ಸೋಮಣ್ಣನವರು ವಿಧ್ಯುಕ್ತವಾಗಿ ನೆರವೇರಿಸಿದರು. ನಿರೂಪಣೆಯನ್ನು ಸಂಘದ ಕಾರ್ಯದರ್ಶಿ ಕೂಡಕಂಡಿ ಬಾಲಕೃಷ್ಣನವರು ರಸವತ್ತಾಗಿ ನಿರೂಪಿಸಿದರು.

ಸಭೆಯ ಅಧ್ಯಕ್ಷತೆಯನ್ನು ಚೆಟ್ಟಿಮಾಡ ಬಸಪ್ಪನವರ ಅನುಪಸ್ಥಿತಿಯಲ್ಲಿ ಉಪಾಧ್ಯಕ್ಷರಾದ ಶ್ರೀ ತೋಟಂಬೈಲು ಪ್ರಭಾಕರನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕುಶಾಲನಗರ ಗೌಡ ಸಮಾಜದ ಅಧ್ಯಕ್ಷರು, ಕಾಫಿ ಪ್ಲಾಂಟರ್‌ಗಳು, ಸಮಾಜ ಸೇವಕರು, ಕೊಡುಗೈ ದಾನಿಗಳು ಆದ ಶ್ರೀ ಕೋರನ ಪೂಣಚ್ಚನವರು ಆಗಮಿಸಿದ್ದರು. ಇನ್ನೊಬ್ಬ ಮುಖ್ಯ ಅತಿಥಿಗಳಾಗಿ ಮೈಸೂರಿನಿಂದ ಹೊರ ಬರುತ್ತಿರುವ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರು, ಕೊಡಗು ಗೌಡ ವಿದ್ಯಾ ಸಂಘದ ಮತ್ತು ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ನಿರ್ದೇಶಕರು ಆದ ಶ್ರೀ ಪಟ್ಟಡ ಪ್ರಭಾಕರನವರು ಆಗಮಿಸಿದ್ದರಲ್ಲದೆ ಸಭಾ ವೇದಿಕೆಯಲ್ಲಿ ಶ್ರೀ ಹುದೇರಿ ಸೋಮಣ್ಣನವರು, ಕುಯ್ಯಮುಡಿ ಪೊನ್ನಪ್ಪನವರು, ಮಾಯೆಟ್ಟಿ ಗಣಪತಿಯವರು, ಕೊಕ್ಕಲೆ ಪೂವಯ್ಯನವರು, ಕಜೆಮನೆ ಅಪ್ಪಚ್ಚುನವರು, ಬಾಡನ ಪಾರ್ವತಿಯವರು ಹಾಗೂ ಚೆಟ್ಟಿಮಾಡ ನ್ಯಾನ್ಸಿ ಬಸಪ್ಪನವರು ಉಪಸ್ಥಿತರಿದ್ದರು.

ಈ ಹಿಂದೆ ನಡೆದ ಚರ್ಚಾಗೋಷ್ಠಿ ಮತ್ತು ಸಂಘದ ಅಭಿವೃದ್ಧಿ ಮತ್ತು ಸಮಾಜದ ಕಲಾಪಗಳಿಗೆ ಬೇಕಾಗುವ ನಿಧಿಗಾಗಿ ತಾಲೋಕಿನಲ್ಲಿ ನೆಲೆಸಿರುವ ಬಾಂಧವರನ್ನು ವಿನಂತಿಸಲಾಯಿತು. ಕುಯ್ಯಮುಡಿ ಮುತ್ತಣ್ಣನವರು ಗಂಡುಸ್ವರದ ಪ್ರಭಾವಶಾಲಿಯ ಮನವೊಲಿಸುವ ವಿನಂತಿಯಿಂದ ಸಭಿಕರಿಂದ ಕಟ್ಟಡದ ನಿರ್ಮಾಣಕ್ಕಾಗಿ ಕುಬೇರನೇ ಎದ್ದು ಬಂದು ಹರಿಸಿದ ವಾತಾವರಣ ನಿರ್ಮಿಸಿದರು. ಸಭೆಯಲ್ಲಿ ಭರವಸೆ ನೀಡಿದವರ ಪಟ್ಟಿಯನ್ನು ಈ ಕೆಳಗೆ ಪ್ರತ್ಯೇಕವಾಗಿ ನೀಡಲಾಗಿದೆ.

ಮುಖ್ಯ ಅತಿಥಿ ಕೋರನ ಪೂಣಚ್ಚನವರು ನಮ್ಮ ಜನಾಂಗದ ಭಾಷೆ, ಸಂಸ್ಕೃತಿ, ವಿದ್ಯಾ ಸಂಘದ ಕಾರ್ಯಕಲಾಪದ ಬಗ್ಗೆ "ಎತ್ತು

## ದಾನಿಗಳ ಪಟ್ಟಿ

| | |
|---|---|
| ಸೋಮೆಟ್ಟಿರ ದೇವಯ್ಯ | 10,000 |
| ಮೇಡ್ತನ ತಿಮ್ಮಯ್ಯ, ಶಿವಾಜಿ ಸಹೋದರರು | 10,000 |
| ಕೂಡಕಂಡಿ ಬಾಲಕೃಷ್ಣ | 10,000 |
| ಕರೆಮನೆ ಅಪ್ಪಚ್ಚು (2,000 + ದ್ವಾರಕ್ಕೆ ಗೇಟು) | 2,000 |
| ಪೆಮ್ಮಟ್ಟೆ ಫಾಲಾಕ್ಷ | 7,000 |
| ಹುದೇರಿ ಸೋಮಣ್ಣ | 6,001 |
| ಕುಯ್ಯಮುಡಿ ಪೊನ್ನಪ್ಪ | 6,000 |
| ಬಲ್ಯಾಟಿನ ಕುಶಾಲಪ್ಪ | 5,000 |
| ಬಾಡನ ಪಾರ್ವತಿ | 5,000 |
| ಸೂದನ ದೇವಯ್ಯ | 5,000 |
| ಪೊನ್ನಚನ ಬಿದ್ದಪ್ಪ | 5,001 |
| ಚೆಟ್ಟಿಮಾಡ ಬಸಪ್ಪ | 5,100 |
| ಕೊರಂಬಡ್ಕ ಬಿದ್ದಪ್ಪ | 5,001 |
| ಕುಯ್ಯಮುಡಿ ಮುತ್ತಣ್ಣ | 5,001 |
| ನಿಡ್ಯಮಲೆ ತಿಮ್ಮಯ್ಯ ಸಹೋದರರು | 5,001 |
| ಕರಕರನ ಕುಶಾಲಪ್ಪ ಸೋಹದರರು | 5,001 |
| ಕೂಡಕಂಡಿ ನಿಶಾಪತಿ | 5,001 |
| ಪೊಕ್ಕುಳಂಡ್ರ ನಿಂಗಪ್ಪ | 5,001 |
| ಕುಯ್ಯಮುಡಿ ಕುಟ್ಟಪ್ಪ | 5,001 |
| ತೋಟಂಬೈಲು ಪ್ರಭಾಕರ | 5,001 |
| ಮೇಡ್ತನ ಸುಬ್ಬಯ್ಯ | 3,001 |
| ಕುಯ್ಯಮುಡಿ ಕುಮಾರ | 3,001 |
| ನಡುಗಲ್ಲು ಪೂವಯ್ಯ | 3,001 |
| ಮುಕ್ಕಾಟಿ ಪೂವಯ್ಯ | 3,001 |
| ಕೊಕ್ಕಲೆ ಪೂವಯ್ಯ | 2,501 |
| ಕುಯ್ಯಮುಡಿ ಬಿದ್ದಪ್ಪ | 2,100 |
| ನಿರ್ವಾಣಿ ಗೋಪಾಲ | 2,001 |
| ನಿರ್ವಾಣಿ ಆನಂದ | 2,001 |
| ಕೂರನ ಗಣೇಶ | 2,001 |
| ಚಂಡಿ ಬೋಪಯ್ಯ | 2,001 |
| ಪಾಡ್ಯನ ಗಣಪತಿ | 2,001 |
| ಉಳುವಾರನ ಜನಾರ್ಧನ | 2,001 |
| ಕೊರಂಬಡ್ಕ ಅಪ್ಪಣ್ಣ | 2,001 |
| ಕೊರಂಬಡ್ಕ ರಾಮಪ್ಪ | 2,001 |
| ನಡುಬೆಟ್ಟ ಕಮಲ ಸೋಮಯ್ಯ | 2,001 |
| ಕರೆಮನೆ ಚಿಣ್ಣಪ್ಪ | 2,001 |
| ಮುಕ್ಕಾಟ ಚಿಣ್ಣಪ್ಪ | 2,001 |
| ಬೊಟ್ಟುಮನೆ ದೇವಯ್ಯ | 2,001 |
| ಬೈಲೆ ತಿಮ್ಮಯ್ಯ | 2,001 |
| ಮೇಡ್ತನ ಗೋಪಾಲ | 2,001 |
| ಕರೆಮನೆ ಪೂವಯ್ಯ | 2,001 |
| ಸೂದನ ಪೂವಯ್ಯ | 2,001 |
| ಬಲ್ಯಡ್ಕ ಚಂಗಪ್ಪ | 1,500 |
| ಕುಂಡ್ಯೇನ ಶಿವಯ್ಯ | 1,501 |
| ಸುಳ್ಯಕೋಡಿ ಭೀಮಯ್ಯ | 1,000 |
| ಓಡಿಯನ ಬೋಪಯ್ಯ | 1,000 |
| ಶಿರಕಜೆ ನಾಣಯ್ಯ | 1,000 |
| ಬಾರಿಯಂಡ ಸೋಮಯ್ಯ | 1,000 |
| ಕಾಯರ್ ತೋಡ್ ಅರವಿಂದ್ | 1,000 |
| ಕಾಯಲಾಡಿ ಬಸಪ್ಪ | 1,000 |
| ಅಯ್ಯೇಟಿ ಮಣಿ | 1,001 |
| ಕುಯ್ಯಮುಡಿ ದಯಾನಂದ | 1,001 |
| ಮುಕ್ಕಾಟಿ ಪೂವಯ್ಯ | 1,001 |
| ಮುಕ್ಕಾಟಿ ಸೋಮಯ್ಯ | 1,001 |
| ಕುಯ್ಯಮುಡಿ ಚಿಣ್ಣಪ್ಪ | 1,001 |
| ಪಾಣತ್ತಲೆ ತಿಮ್ಮಯ್ಯ | 1,001 |
| ಕೂರನ ದೇವಯ್ಯ | 1,001 |
| ಹೊಸೋಕ್ಲು ಸೋಮಯ್ಯ | 1,001 |
| ಕೊಂಬನ ಬಿದ್ದಪ್ಪ, ನಾಪೋಕ್ಲು | 1,001 |
| ಕೊಂಬನ ಪೂಣಚ್ಚ | 1,001 |
| ಪಾಣತ್ತಲೆ ರಾಘವಯ್ಯ | 501 |

**ವರದಿ : ಪಟ್ಟಡ ಪ್ರಭಾಕರ**

---

**5ನೇ ಪುಟದಿಂದ**

ಎಂತಹ ಬುದ್ಧಿವಂತಿಕೆಯ ಕೆಲಸ !

ಯಾರು...... ಯಾರು ಇದನ್ನು ಮಾಡಿದವರು? ಅಣ್ಣಂದಿರು ಹುಚ್ಚರು, ಇನ್ನು ಅಕ್ಕ...... !

ಯಾರು...... ಯಾರಿರಬಹುದು?

ಪ್ರಸನ್ನ ರಾತ್ರಿ ಹನ್ನೆರಡು ಗಂಟೆಯ ಸಮಯದಲ್ಲಿ ಎದ್ದು ಬಂದು ಪರಿಶೀಲಿಸಿದನು.

ಅಣ್ಣಂದಿರ ಕೊಠಡಿ.

ಯಾರಿಗೂ ಸುಳಿವೇ ಕೊಡದಂತೆ ಪರಿಶೀಲನೆ ನಡೆಸಿದನು. ವೀರಭದ್ರಯ್ಯ, ಲಿಂಗಯ್ಯ ನಿದ್ರಿಸುತ್ತಿದ್ದರು !

ಅಕ್ಕನ ಕೊಠಡಿಗೆ ಬಂದನು !

ಅರುಂಧತಿ ನಿದ್ರಿಸುತ್ತಿರಲಿಲ್ಲ. ರೂಮಿನಲ್ಲಿ ಅಸಹನೆಯಿಂದ ಚಡಪಡಿಸುತ್ತಾ ತಿರುಗುತ್ತಿದ್ದಳು !

ಅವಳ ಮುಖ ವ್ಯಗ್ರವಾಗಿದೆ !

ಪ್ರಸನ್ನ ಬೆಚ್ಚಿ ಬಿದ್ದನು. ಪ್ರಶಾಂತವಾಗಿ ಮಲಗಿ ನಿದ್ರೆ ಮಾಡಬೇಕಾದ ಸಮಯದಲ್ಲಿ ಅಕ್ಕ ಈ ರೀತಿ ತಿರುಗುತ್ತಾ ಚಡಪಡಿಸುತ್ತಿದ್ದಾಳೆ. ಅವಳನ್ನು ನೋಡಿದರೆ ಏನೋ ಪ್ಲಾನ್ ಮಾಡುತ್ತಿರುವಂತೆ ತೋರುತ್ತದೆ !

ಅಕ್ಕ ಕೊಲೆ ಮಾಡಲು ಪ್ರಯತ್ನಿಸಿದ್ದಾಳೆಯೆ? !

**(ಮುಂದುವರೆಯುತ್ತದೆ)**



# ಪಿರಿಯಾ ಪಟ್ಟಣದ ಅರೆಭಾಷೆ ಗೌಡ ಸಮಾಜದ ಪಕ್ಷಿನೋಟ

ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ಕೊಡಗು ಗೌಡ ಸಮಾಜವನ್ನು ನಿರ್ಮಾಣ ಮಾಡಲು ಹುಣಸೂರಿನಲ್ಲಿ ಅಸ್ತಿತ್ವದಲ್ಲಿದ್ದ ಕೊಡಗು ನೌಕರರ ಗೌಡ ಸಮಾಜದ ಪ್ರೇರಣೆಯಿಂದ 1989ರಲ್ಲಿ ಪ್ರಾರಂಭಿಸಲಾಯಿತು. ಅರೆಭಾಷೆ ಜನಾಂಗವು ಪಿರಿಯಾಪಟ್ಟಣ ತಾಲ್ಲೂಕಿನಲ್ಲಿ ಹೆಚ್ಚಾಗಿ ನೆಲೆಸಿರುವ ಕಾರಣ ಹುಣಸೂರಿನ ಗೌಡ ಸಮಾಜದ ಅಧ್ಯಕ್ಷರು ಆದ ಶ್ರೀ ಸೋಮೆಟ್ಟಿ ದೇವಯ್ಯನವರು ಮತ್ತು ಉಪಾಧ್ಯಕ್ಷರಾದ ಶ್ರೀ ಹುದೇರಿ ಸೋಮಣ್ಣನವರು ಹಾಗೂ ಎಲ್ಲಾ ಕಾರ್ಯಕಾರಿ ಮಂಡಳಿಯವರು ಪಿರಿಯಾಪಟ್ಟಣ ತಾಲ್ಲೂಕಿನ ಕೊಡಗು ಗೌಡ ಸಮಾಜಕ್ಕೆ ದಿನಾಂಕ 2-4-1989ರಂದು ಮಹಾ ಸಭೆಯನ್ನು ಕರೆಯುವುದರ ಮುಖಾಂತರ ವಿಲೀನಗೊಂಡಿತು. ಕೊಡಗು ಗೌಡ ಸಮಾಜ ಎಂದು ನಾಮಕರಣ ಮಾಡಿ ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ ಮತ್ತು ಸಮಾಜದ ಅಭಿವೃದ್ಧಿಯ ಬಗ್ಗೆ ಹೆಚ್ಚು ಒತ್ತು ಕೊಡಲಾಯಿತು.

ಅಂದಿನ ಮಹಾ ಸಭೆಯಲ್ಲಿ ಒಂದು ಕಾರ್ಯಕಾರಿ ಮಂಡಳಿಯನ್ನು ಚುನಾಯಿಸಿ ಚೆಟ್ಟಿಮಾಡ ಬಸಪ್ಪನವರನ್ನು ಅಧ್ಯಕ್ಷರನ್ನಾಗಿಯೂ, ತೋಟಂಬೈಲು ಪ್ರಭಾಕರರವರನ್ನು ಉಪಾಧ್ಯಕ್ಷರನ್ನಾಗಿಯೂ ಮಾಡಲಾಯಿತು. ಕೂಡಕಂಡಿ ಬಾಲಕೃಷ್ಣರವರನ್ನು ಕಾರ್ಯದರ್ಶಿಯನ್ನಾಗಿ, ಕೊಕ್ಕಲೆ ಪೂವಯ್ಯನವರನ್ನು ಖಜಾಂಚಿಯನ್ನಾಗಿಯೂ ಮಾಡಿ ಎಲ್ಲಾ ಗ್ರಾಮಗಳಿಗೆ ಅನ್ವಯವಾಗುವಂತೆ ಸಮಿತಿಯ ನಿರ್ದೇಶಕರನ್ನಾಗಿ ಚುನಾಯಿಸಲಾಯಿತು. 23-3-1990 ರಂದು ಸಮಾಜವು ಗೌಡ ಸಮಾಜ ಎಂದು ನೋಂದಾಯಿಸಲ್ಪಟ್ಟಿತು. ದಿನಾಂಕ 10-3-1991 ರಂದು ಗೌಡ ಸಮಾಜವು 1990-91ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ಕರೆಧಿರುತ್ತದೆ.

ಅಂದಿನ ಸಭೆಗೆ ಅತಿಥಿಯಾಗಿ ಕುದುಪಜೆ ಕೃಷ್ಣಪ್ಪನವರು, ಅಧ್ಯಕ್ಷರು ಗೌಡ ಸಮಾಜ ಮಡಿಕೇರಿ, ಮುಕ್ಕಾಟಿ ವಾಸುದೇವ, ಅಧ್ಯಕ್ಷರು ಪುರಸಭೆ, ಮಡಿಕೇರಿ ಹಾಗೂ ದಂಬೆಕೋಡಿ ಆನಂದ ಕೆ. ಎಸ್.ಎಫ್.ಸಿ., ಡೆಪ್ಯೂಟಿ ಜನರಲ್ ಮ್ಯಾನೇಜರ್, ಮೈಸೂರು ಇವರನ್ನು ಕರೆಸಲಾಯಿತು. ಮಹಾ ಸಭೆಯಲ್ಲಿ ಹಾಲಿ ಕಾರ್ಯಕಾರಿ ಮಂಡಳಿಯವರೆ ಮುಂದುವರೆಯುವಂತೆ ತೀರ್ಮಾನಿಸಲಾಯಿತು.

ಸಮಾಜದಲ್ಲಿ ಒಟ್ಟು 312 ಷೇರುದಾರರಿಂದ 30,333 ಷೇರು ಹಣ ಸಂದಾಯವಾಗಿರುತ್ತದೆ. ಹಾಗೂ 247 ದಾನಿಗಳು 3,15,874/- ರೂಪಾಯಿಗಳ ಧನ ಸಹಾಯ ನೀಡಿರುತ್ತಾರೆ.

ತಾಲ್ಲೂಕಿನ ಎಲ್ಲಾ ಕುಲಬಾಂಧವರುಗಳ ಮನ ಒಲಿಸಿ ಕಡ್ಡಾಯ ಕುಟುಂಬದ ಷೇರು ಹಣ ಮತ್ತು ಶಕ್ತಿಯನುಸಾರ ವಂತಿಕೆ ಹಣವನ್ನು ವಸೂಲಿ ಮಾಡಿದ್ದಾಗಿದೆ. ನಂತರ ಕೊರಂಬಡ್ಕ ಬಿದ್ದಪ್ಪನವರ ಸಲಹೆ ಮತ್ತು ಶ್ರಮದ ಫಲವಾಗಿ ಹೆಚ್ಚು ಕಡಿಮೆ ಒಂದು ಎಕರೆ ಜಮೀನನ್ನು ಅಂದು 45,000/- ಗಳಿಗೆ ಖರೀದಿಸಿ ತನ್ನದೇ ಆದ ನಿವೇಶನವನ್ನಾಗಿರಿಸಿ ಕೊಂಡಿದ್ದಾರೆ. 28-3-1993 ರಂದು ಗೌಡ ಸಮಾಜದ ವಾರ್ಷಿಕ ಮಹಾಸಭೆಯನ್ನು ಸ್ವಂತ ನಿವೇಶನದಲ್ಲಿಯೇ ಚೆಟ್ಟಿಮಾಡ ಬಸಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ಆ ಸಂದರ್ಭದಲ್ಲಿ ಕುಲಬಾಂಧವರು ಮುಂದಿನ ಎಲ್ಲಾ ಸಭೆ ಸಮಾರಂಭಗಳನ್ನು ತಮ್ಮದೇ ಆದ ಕಟ್ಟಡ ಮತ್ತು ನಿವೇಶನದಲ್ಲಿಯೇ ಕಟ್ಟಿ ನಡೆಸುವಂತೆ ತೀರ್ಮಾನ ಮಾಡಲಾಯಿತು. ಆ ಪ್ರಯುಕ್ತ ಕೊರಂಬಡ್ಕ ಬಿದ್ದಪ್ಪನವರನ್ನು ಕಟ್ಟಡ ಸಮಿತಿಯ ಅಧ್ಯಕ್ಷರನ್ನಾಗಿ ಮಾಡಿ ಅವರ ನೇತೃತ್ವದಲ್ಲಿ ನಿರ್ದೇಶಕರು ಹಾಗೂ ಹುಣಸೂರಿನಲ್ಲಿ ಕಿರಿಯ ಅಭಿಯಂತರರು ಆದ ಶ್ರೀ ಸೋಮೆಟ್ಟಿ ದೇವಯ್ಯನವರು ತಾಂತ್ರಿಕ ಸಲಹೆ ಮತ್ತು ನಿರ್ದೇಶಕ ಹುದೇರಿ ಸೋಮಣ್ಣನವರ ಸಕಾಲಕ್ಕೆ ಸರಿಯಾದ ಸಲಹೆ ಸೂಚನೆಯ ಮೇರೆಗೆ ಇಂದು 1,41,956/- ರೂ. ಗಳ 7 ಚದರದ ಚಿಕ್ಕ ಕಟ್ಟಡವನ್ನು ಜನಾಂಗಕ್ಕೆ ನೀಡಿದ್ದಾಗಿದೆ.

ದಿನಾಂಕ 7-5-1998 ರಂದು ದಾನಿಗಳಾದ ಶ್ರೀ ಮಾನ್ಯ ಶ್ರೀ ಕುರುಂಜಿ ವೆಂಕಟರಮಣ ಗೌಡರು, ಸಂಸ್ಥಾಪಕರು, ಕೆ.ವಿ.ಜಿ. ಸುಳ್ಯ ಇವರು ನೂತನ ಕಟ್ಟಡದ ಉದ್ಘಾಟನೆಯನ್ನು ನೆರವೇರಿಸಿರುತ್ತಾರೆ. ಅಂದಿನ ಸಭೆಯು ಮಾನ್ಯ ಶ್ರೀ ದಂಬೆಕೋಡಿ ಚಿಣ್ಣಪ್ಪನವರು, ಮಾಜಿ ಸಚಿವರು ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ನಡೆದು ಮಾನ್ಯ ಶ್ರೀ ಬಸವೇಗೌಡರು ಅಧ್ಯಕ್ಷ, ಕೆಂಪೇಗೌಡ ಮೆಡಿಕಲ್ ಕಾಲೇಜು, ಬೆಂಗಳೂರುರವರು ಜ್ಯೋತಿಯನ್ನು ಬೆಳಗಿರುತ್ತಾರೆ. ಚೆಟ್ಟಿಮಾಡ ಆನಂದರವರು, ನಿವೃತ್ತ ಪ್ರಾಂಶುಪಾಲರು ಸರಕಾರಿ ವೈದ್ಯಕೀಯ ಕಾಲೇಜು, ಬೆಂಗಳೂರುರವರು ನಿಧಿ ರಶೀತಿ ಪುಸ್ತಕವನ್ನು ಬಿಡುಗಡೆ ಮಾಡಿರುತ್ತಾರೆ. ಸಭೆಯಲ್ಲಿ ದಾನಿಗಳಾದ ಕುರಂಜಿ ವೆಂಕಟರಮಣಗೌಡರು ಒಂದು ಲಕ್ಷ ರೂಪಾಯಿ ನಗದು ಹಣವನ್ನು ಗೌಡ ಸಮಾಜದ ಮುಂದಿನ ಕಟ್ಟಡದ ಅಭಿವೃದ್ಧಿಗೆ ಕೊಟ್ಟಿರುತ್ತಾರೆ. ದಂಬೆಕೋಡಿ ಚಿಣ್ಣಪ್ಪನವರು ಉದಾರ ದಾನ 22,500/- ರೂಪಾಯಿಗಳ ಬಾಬ್ತು ಒಂದು ಕೊಳವೆ ಬಾವಿ ಮತ್ತು ಅದಕ್ಕೆ ವಿದ್ಯುತ್ ಯಂತ್ರ ಜೋಡಣೆಗೆ ಧನಸಹಾಯ ನೀಡಿದ್ದಾರೆ. ಮಂದ್ರೀರ ನಾಣಯ್ಯನವರು ಉದಾರವಾಗಿ 15,000/ - ರೂಪಾಯಿಗಳ ಧನ ಸಹಾಯದಿಂದ ಈಗಿರುವ ನಿವೇಶನದ ಸುತ್ತಲು ಕಲ್ಲಿನ ಕಂಬ ಮತ್ತು ತಂತಿಯ ಜೋಡಣೆಯಿಂದ ತಂತಿ ಬೇಲಿಯನ್ನು ಮಾಡಿದ್ದಾಗಿದೆ. ಹಾಗೂ ಅನೇಕ ಕೊಡುಗೈ ಉದಾರ ದಾನಿಗಳಿಂದ ದೊರೆದ ಧನ ಸಹಾಯವನ್ನು ಬ್ಯಾಂಕಿನ ಖಾತೆಯಲ್ಲಿ ಠೇವಣಿ ಇಡಲಾಗಿದೆ. ಸಮಾಜದ ಕಟ್ಟಡಕ್ಕೆ ವಿದ್ಯುತ್ ಕೂಡ ಅಳವಡಿಸಲಾಗಿದೆ. ಕಾರ್ಯಕಾರಿ ಮಂಡಳಿಯ ಸಭೆಯು ಸಕಾಲದಲ್ಲಿ ಸಭೆ ಸೇರಿ ಕಾರ್ಯಕಲಾಪಗಳನ್ನು ನಡೆಸುತ್ತಾ ಬರುತ್ತಿರುತ್ತದೆ.

ಇನ್ನು ಮುಂದಕ್ಕೆ ಈ ಕಟ್ಟಡವನ್ನು ಅಭಿವೃದ್ಧಿ ಪಡಿಸಲು ತುರ್ತಾಗಿ ಒಂದು ದಾಸ್ತಾನು ಕೊಠಡಿ, ಅಡಿಗೆ ಕೋಣೆ, ಮತ್ತು ಎರಡು ಶೌಚಾಲಯಗಳನ್ನು ನಿರ್ಮಿಸಲು ಹೆಚ್ಚು ಕಡಿಮೆ 2,00,000/- ರೂಪಾಯಿಗಳ ಅಂದಾಜು ಮಾಡಲಾಗಿದೆ. ಈ ನಮ್ಮ ಕಟ್ಟಡಕ್ಕೆ ಸ್ಥಳೀಯ ಜನರ ಸಭೆ ಸಮಾರಂಭಗಳಿಗೆ ಹೆಚ್ಚು ಬೇಡಿಕೆ ಇರುವುದರಿಂದ ನಮ್ಮ ತಾಲ್ಲೂಕಿನ ಕುಲಬಾಂಧವರುಗಳು ಮತ್ತು ನಾಡಿನ ಜನತೆಯು ತನುಮನ ಧನ ಸಹಾಯ ಮಾಡಿ ಸದರಿ ಕಟ್ಟಡವನ್ನು ಆದಷ್ಟು ಬೇಗ ಪೂರ್ಣಗೊಳಿಸಲು ಈ ಮೂಲಕ ವಿನಂತಿಸಲಾಗಿದೆ.

# ವ್ಯಕ್ತಿ ಪರಿಚಯ :

ಡಾ. ಕುದುಪಜೆ ಮನೋಜ್ ಬೋಜಪ್ಪ

ಕೆ. ಸಿ. ಮುತ್ತಣ್ಣ ಮತ್ತು ಗಂಗಮ್ಮನವರ ಸುಪುತ್ರ ಶ್ರೀ ಕೆ. ಯಂ ಬೋಜಪ್ಪ ಇವರು ತಮ್ಮ ಗೃಹಲಕ್ಷ್ಮಿ ಶಾಂತಿಯೊಂದಿಗೆ ಶಾಂತ ವಾತಾವರಣದಲ್ಲಿ ತಮ್ಮ ಸ್ವಂತ ಮನೆಯಲ್ಲಿ ಕುಶಾಲನಗರದಲ್ಲಿ ವಾಸವಿದ್ದಾರೆ. ಬೋಜಪ್ಪನವರು ಸೈನ್ಯದಲ್ಲಿ ತರಬೇತಾದ ಮಾಜಿ ಯೋಧರು. ಈಗ ಕೆನರಾಬ್ಯಾಂಕ್ ಕುಶಾಲನಗರದಲ್ಲಿ ಉದ್ಯೋಗಿ. ಹಾಗೂ ಜನಪ್ರಿಯರು. ಅವರ ಧರ್ಮಪತ್ನಿ, ಶಾಂತಿಯವರು ಹೆಸರಿಗೆ ತಕ್ಕಂತೆ ಶಾಂತ ಚಿತ್ತದ ಕಾರ್ಯನ್ವೈಖರಿಯವರು, ಸೌಮ್ಯ ಸ್ವಭಾವದವರು, ಪ್ರೀತಿ ವಾತ್ಸಲ್ಯದ ಗಣಿ.

ಬೋಜಪ್ಪ, ಶಾಂತಿ ಜೋಡಿಗೆ ಕೀರ್ತಿಗೊಂದು, ಆರತಿಗೊಂದು ಎಂಬಂತೆ ಒಂದು ಗಂಡು, ಒಂದು ಹೆಣ್ಣು ಮಕ್ಕಳು. ಈ ದಂಪತಿಯರ ಸುಪುತ್ರ ಡಾಕ್ಟರ್ ಆಗಿರುವ ಕುದುಪಜೆ ಮನೋಜ್ ಬೋಜಪ್ಪನವರ ಜನನ 18-8-1973. ತಂದೆ ಸೈನ್ಯದಲ್ಲಿದ್ದದ್ದರಿಂದ ಇವರ ಜನನ ಜೋಧ್‌ಪುರದಲ್ಲಿ. ವಿದ್ಯಾಭ್ಯಾಸವೆಲ್ಲವೂ ಕಾನ್ವೆಂಟು, ಗೋಣಿಕೊಪ್ಪ, ಸ್ಪೋರ್ಟ್ ಹಾಸ್ಟೆಲ್ ಕೂಡಿಗೆ(ಕೊಡಗು), ಸೆಂಟ್ ಎಲೋಷಿಯಸ್ಸ್ ಕಾಲೇಜು ಮಂಗಳೂರಲ್ಲಿ ಪಿ.ಯು.ಸಿ. ವ್ಯಾಸಂಗ; ನಂತರ ಬೆಂಗಳೂರು ಕೃಷಿ ವಿಶ್ವವಿದ್ಯಾಲಯ ಹೆಬ್ಬಾಳದಲ್ಲಿ ಪಶುವೈದ್ಯ ಶಿಕ್ಷಣದಲ್ಲಿ 91%ನಲ್ಲಿ ಎಂ. ವಿ. ಎಸ್ಸಿ.ಯ ಪದವಿ ಪಡೆದು ಡಾಕ್ಟರಾದವರು. ಇವರಿಗೆ ಒಬ್ಬ ಸಹೋದರಿ. ಇವಳು ಬಿ. ಕಾಂ. ಪದವೀಧರೇ. ಮಿಸೆಸ್ ಮಮತಾ ಸದಾಶಿವ. ಇವರು ಪಕ್ಕದ ಕೊಪ್ಪದಲ್ಲಿ ಫೈನಾನ್ಸ್‌ನಲ್ಲಿ ನೌಕರರು. ಇದು ಬೋಜಪ್ಪ ಮತ್ತು ಶಾಂತಿಯವರು ದೇಶಕ್ಕೆ ನೀಡಿದ ಉತ್ತಮ ಕೊಡುಗೆ.

ಡಾ. ಮನೋಜ್ ಬೋಜಪ್ಪನವರು ತನ್ನ ಎಂ. ವಿ. ಎಸ್ಸಿ. ಗಳಿಸಿದ ನಂತರ ತನ್ನಲ್ಲಿರುವ ಜ್ಞಾನದಾಹದಿಂದ ಹೆಚ್ಚಿನ ವ್ಯಾಸಂಗಕ್ಕಾಗಿ ಅಮೇರಿಕಾ ದೇಶದ ಕುಂಟ್ವೆಕಿ (Kuntveky) ಯಲ್ಲಿ ಅಭ್ಯಸಿಸಲು ಅಮೇರಿಕಾವನ್ನು ತಲುಪಿದ್ದಾರೆ. ಆ ಶುಭ ಗಳಿಗೆಯಲ್ಲಿ ಅವರನ್ನು ಸಂದರ್ಶಿಸಿ ನಮ್ಮ ಕೊಡಗಿನ ಮಣ್ಣು, ನೀರು ಗಾಳಿ ನಮಗೆ ಪವಿತ್ರ ಮತ್ತು ಜೀವದಾತೆ. ಈ ಮಣ್ಣಿನಲ್ಲಿ ಹುಟ್ಟಿದ ಹೈದಗಳಾಗಲೀ, ಗಂಡೇಗಳಾಗಲೀ ಉನ್ನತ ಸ್ಥಿತಿಗೇರುವುದನ್ನು ಕಂಡು ನಾವು ಹಿಗ್ಗಬೇಕು. ಇತರರನ್ನೂ ಪ್ರೋತ್ಸಾಹಿಸಬೇಕು. ಸಂದರ್ಶನ ಸಮಯದಲ್ಲಿ ಹರ್ಷಚಿತ್ತರಾದ ಕುದುಪಜೆ ಕುಟುಂಬ ನನ್ನ ಪ್ರಪ್ರಥಮ ಅನಿರೀಕ್ಷಿತ ಭೇಟಿಗೆ ಸಂತೋಷವನ್ನೂ, ಆಶ್ಚರ್ಯವನ್ನೂ, ಆತ್ಮೀಯತೆಯನ್ನೂ, ಸೌಹಾರ್ದತೆ, ಪ್ರೀತಿ ವಿಶ್ವಾಸಗಳನ್ನೂ ಮನತುಂಬ ಪ್ರದರ್ಶಿಸಿ ಸ್ವಾಗತಿಸಿದರು.

ಡಾ. ಮನೋಜ್ ಬೋಜಪ್ಪನವರನ್ನು ನಿಮ್ಮ ಉನ್ನತಿಗೆ ಸಿಕ್ಕಿದ ಸೌಕರ್ಯಗಳೇನೆಂದು ಪ್ರಶ್ನಿಸಿದಾಗ ಕ್ಷಣ ಮಾತ್ರದಲ್ಲಿ ಬಂದ ಉತ್ತರ "ನನ್ನ ಏಳ್ಗೆಗೆ ನನ್ನ ತಂದೆ, ತಾಯಿ ಮತ್ತು ಸಹೋದರಿಯ ಪ್ರೋತ್ಸಾಹ"ವೆಂದರು.

ಡಾ. ಮನೋಜ್ ಬೋಜಪ್ಪನವರು ಒಳ್ಳೆಯ ದಕ್ಷ ಹಾಕಿ ಪಟು. ಯೂನಿವರ್ಸಿಟಿಯ ಹಾಕಿ ಕ್ಯಾಪ್ಟನ್ ಕೂಡ. ಆದರೂ ಅವರಲ್ಲಿ ಕೊರತೆ ಒಂದಿತ್ತು. ನಾನು ರಾಷ್ಟ್ರೀಯ ಆಟಗಾರನಾಗಲಿಲ್ಲ ಎಂಬುದು. ಪಾಠದಲ್ಲಿದ್ದಂತೆ ಆಟದಲ್ಲೂ ತಲೆಕೆಡಿಸಿಕೊಂಡವರು. ಪಾಠದಷ್ಟೇ ಆಟವೂ ಮುಖ್ಯ ಎಂದರು. ಕಾಲೇಜು ಸೇರುವಲ್ಲಿ ಸ್ವಲ್ಪ ಕಷ್ಟವನ್ನು ಎದುರಿಸಬೇಕಾಯಿತು. ಆಗ ಶ್ರೀಯುತ ಕೆದಂಬಾಡಿ ಸೋಮಣ್ಣನವರ ಸೇವೆ, ಮುತುವರ್ಜಿ, ಪ್ರಯತ್ನಗಳನ್ನು ಶ್ಲಾಘಿಸಿ ನೆನಪಿಸಿಕೊಂಡರು. ಇವರಲ್ಲದೆ ಚಿಕ್ಕಪ್ಪ ಜಯಂತಿ ಲಕ್ಷ್ಮಣ, ವಸಂತಿ ಕಾರ್ಯಪ್ಪ, ಶೋಭ ಲವ, ಮತ್ತು ಮೋಹನ್ ಆರ್ತಿ ಇವರೆಲ್ಲರೂ ವಿವಿಧ ಹಂತದಲ್ಲಿ ಇವರನ್ನು ಪ್ರೋತ್ಸಾಹಿಸಿದವರು. ಇವರನ್ನೆಲ್ಲಾ ತುಂಬು ಹೃದಯದಿಂದ ನೆನಪಿಸಿಕೊಂಡರು. ಡಾ. ಮನೋಜ್ ಬೋಜಪ್ಪನವರನ್ನು ಅಮೇರಿಕಾಕ್ಕೆ ಹೋಗಲು ತಯಾರು ಮಾಡಿದವರು ಹೆಬ್ಬಾಳ ಕೃಷಿ ವಿದ್ಯಾಲಯದ ಕೃಷಿ ಪಾಠ ತಜ್ಞರಾದ ಪ್ರೊಫೆಸರ್ ದೇವೇಗೌಡರು. ಇವರನ್ನಂತೂ ಬಹುವಾಗಿ ನೆನೆದು ಶ್ಲಾಘಿಸಿದರು.

ಏನೇ ಆಗಲಿ, ಹೇಗೆ ಆಗಲಿ ನಮ್ಮೂರಿನ ಹೈದ ಅಮೇರಿಕದಲ್ಲಿ ವ್ಯಾಸಂಗ ಮುಗಿಸಿ ತಾಯಿನಾಡಿಗೆ ಹಿಂತಿರುಗಿ, ಗುಣವತಿಯಾದ ಸಹಧರ್ಮಿಣಿಯನ್ನು ಕೈಹಿಡಿದು ಗೃಹಲಕ್ಷ್ಮಿಯನ್ನಾಗಿ ಮಾಡಿಕೊಂಡು ತನ್ನ ಸೇವೆಯನ್ನು ನಾಡಿಗಾಗಿ ಮುಡಿಪಾಗಿಟ್ಟು, ತನಗೂ ತನ್ನ ತಂದೆ ತಾಯಿಯರಿಗೂ, ಕುಟುಂಬಕ್ಕೂ, ಜನಾಂಗಕ್ಕೂ, ನಾಡಿಗೂ ಕೀರ್ತಿ ತರಲೆಂದು ನಾವೆಲ್ಲರೂ ಆದಿ ಶ್ರೀ ಕಾವೇರಮ್ಮೆಯನ್ನೂ, ಕುಲದೇವ್ರು ವೆಂಕಟರಮಣರನ್ನು ಪ್ರಾರ್ಥಿಸಿ ಶುಭ ಹಾರೈಸುವ.

ಚೇಂದ್ರಿಮಾಡ ಮುತ್ತಪ್ಪ, ಕುಶಾಲನಗರ

---

## ನುಡಿ ಮುತ್ತುಗಳು

೧. ಬದ್‌ಕ್‌ಗಾಗಿ ತಿನ್ನ್
ತಿಂಬಕ್ಕಾಗಿ ಬದ್ಕ್‌ಪೇಡ

೨. ಬಾನಲ್ಲಿ ಚುಕ್ಕಿಯಾಗಿ ಮಿನುಗುವ ಬದಲು
ಮನೆಯಲ್ಲಿ ದೀಪವಾಗಿ ಬೆಳಗು

ಎಡಿಕೇರಿ ಜೆ. ಜಗನ್ನಾಥ್
ಬಲ್ಲಮಾವಟಿ

## ಕಿರು ಪರಿಚಯ :

ದಿನಾಂಕ 27-11-1999ರಂದು ಕರ್ನಾಟಕ ಸರ್ಕಾರದ ಅಧಿಸೂಚನೆ ಅನ್ವಯ ಕರ್ನಾಟಕ ರಾಜ್ಯದ ಹೆಚ್ಚುವರಿ ಸರಕಾರಿ ಅಭಿಯೋಜಕರು (ಅಡಿಷನಲ್ ಸ್ಟೇಟ್ ಪಬ್ಲಿಕ್ ಪ್ರಾಸಿಕ್ಯೂಟರ್) ಆಗಿ ಆಯ್ಕೆ ಆಗಿದ್ದಾರೆ. ಮೂಲತಃ ತಾವು ನಾಡಿನ ನಿಡ್ಯಮಲೆ ವೆಂಕಟರಮಣ ಪ್ರಕಾಶ್‌ನವರು.



ನಿಡ್ಯಮಲೆ ವೆಂಕಟರಮಣ ಪ್ರಕಾಶ್

ಮಡಿಕೇರಿ ತಾಲ್ಲೂಕು ಭಾಗಮಂಡಲ ಗ್ರಾಮದ ದಿವಂಗತ ನಿಡ್ಯಮಲೆ ವೆಂಕಟರಮಣರವರ ಪ್ರಥಮ ಪುತ್ರರು. ತನ್ನ ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ ಹಾಗೂ ಪ್ರೌಢ ಶಿಕ್ಷಣವನ್ನು ಭಾಗಮಂಡಲದಲ್ಲಿ ಮಾಡಿ, ಕಾಲೇಜು ವಿದ್ಯಾಭ್ಯಾಸವನ್ನು ಮತ್ತು ಕಾನೂನು ವಿದ್ಯಾಭ್ಯಾಸವನ್ನು ಮೈಸೂರಿನಲ್ಲಿ ಮಾಡಿರುತ್ತಾರೆ. ಇವರು ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುವಾಗ "ವಿದ್ಯಾರ್ಥಿ ಸಂಘದ ನಾಯಕ"ನಾಗಿ ಆಯ್ಕೆ ಆಗಿ ವಿದ್ಯಾರ್ಥಿ ಸಮುದಾಯದ ಮತ್ತು ಶಿಕ್ಷಣ ಸಂಸ್ಥೆಯ ಹಲವಾರು ಕುಂದು ಕೊರತೆಗಳ ಬಗ್ಗೆ ಹೋರಾಟ ಮಾಡಿರುತ್ತಾರೆ.

1982ರಲ್ಲಿ ಇವರು ವಕೀಲ ವೃತ್ತಿಯನ್ನು ಮಡಿಕೇರಿಯಲ್ಲಿ ಪ್ರಾರಂಭ ಮಾಡಿದರು. ಮಡಿಕೇರಿ ನಗರದಲ್ಲಿ ಸುಮಾರು ನಾಲ್ಕು ವರುಷಗಳ ಕಾಲ ವಕೀಲ ವೃತ್ತಿ ಮಾಡುವ ಸಂದರ್ಭದಲ್ಲಿ ರಾಜಕೀಯ ಪಕ್ಷದಲ್ಲಿ ಅಂದರೆ ಕಾಂಗ್ರೆಸ್ ಪಕ್ಷದಲ್ಲಿ ಜಿಲ್ಲಾ ಮಟ್ಟದ ಮತ್ತು ತಾಲ್ಲೂಕು ಮಟ್ಟದ ಪದಾಧಿಕಾರಿಯಾಗಿ ಕಾರ್ಯವನ್ನು ನಿರ್ವಹಿಸಿರುತ್ತಾರೆ. ಅಲ್ಲದೇ ಮಡಿಕೇರಿ ತಾಲ್ಲೂಕು "ಭೂ ಅಭಿವೃದ್ಧಿ ಬ್ಯಾಂಕಿನ ನಿರ್ದೇಶಕ"ನಾಗಿ ಆಯ್ಕೆಯಾಗಿ ಕಾರ್ಯವನ್ನು ನಿರ್ವಹಿಸಿದ್ದಾರೆ. ಕೊಡಗು ಗೌಡ ವಿದ್ಯಾ ಸಂಘದ ಕಾರ್ಯದರ್ಶಿಯಾಗಿ ಎರಡು ಬಾರಿ ಆಯ್ಕೆಯಾಗಿ ಕಾರ್ಯ ನಿರ್ವಹಿಸಿದ್ದಾರೆ.

1985ರಲ್ಲಿ ವಕೀಲ ವೃತ್ತಿಯನ್ನು ಬೆಂಗಳೂರು ನಗರದಲ್ಲಿ ಮುಂದುವರೆಸಿದರು. ಬೆಂಗಳೂರು ನಗರದಲ್ಲೂ ಸಹಾ ತನ್ನ ರಾಜಕೀಯ ಚಟುವಟಿಕೆ, ಸಾಮಾಜಿಕ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಬಂದಿರುತ್ತಾರೆ. ಬೆಂಗಳೂರು ನಗರದ "ವಕೀಲರ ಸಂಘದ ಜಂಟಿ ಕಾರ್ಯದರ್ಶಿ"ಯಾಗಿ ಸಹ ಕಾರ್ಯವನ್ನು ನಿರ್ವಹಿಸಿದ್ದಾರೆ.

ಇವರು ಹಲವಾರು ಸಂಘ ಸಂಸ್ಥೆಯ ಕಾನೂನು ಸಲಹೆಗಾರನಾಗಿ ಇರುತ್ತಾರೆ. ಅದರಲ್ಲು ಮುಖ್ಯವಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕಾನೂನು ಸಲಹೆಗಾರನಾಗಿರುತ್ತಾರೆ. ಸಿ. ಬಿ. ಐ. ಸಂಸ್ಥೆಯಲ್ಲಿ ವಿಶೇಷ ಕಾನೂನು ಸಲಹೆಗಾರನಾಗಿ ಸಹ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ.

ಮಾನ್ಯ ಕರ್ನಾಟಕ ಸರಕಾರವು ಇವರ ಅರ್ಹತೆಯನ್ನು ಪರಿಗಣಿಸಿ ಸರಕಾರದ ಅಧಿಸೂಚನೆ ಅನ್ವಯ ದಿನಾಂಕ 24-11-1999 ರಂದು ಸರಕಾರದ "ಹೆಚ್ಚುವರಿ ಸರಕಾರಿ ಅಭಿಯೋಜಕರು" (ಅಡಿಷನಲ್ ಸ್ಟೇಟ್ ಪಬ್ಲಿಕ್ ಪ್ರಾಸಿಕ್ಯೂಟರ್) ಆಗಿ ನೇಮಿಸಿರುತ್ತದೆ ಅರೆಭಾಷೆ ಗೌಡರಿಗೆ ಕೀರ್ತಿಯನ್ನು ಹೆಮ್ಮೆಯನ್ನು ತಂದಿರುವ ಇವರಿಗೆ ಕುಲದೇವ್ರು ಶ್ರೀ ವೆಂಕಟರಮಣನ ಅನುಗ್ರಹ ಸದಾ ಇದ್ದು ಇನ್ನು ಹೆಚ್ಚಿನ ಮೇಲ್ಮಟ್ಟ ಪದವಿಗೇರಲಿ ಎಂದು ಸಂಗಾತಿ ನಾಡಿನ ಜನಾಂಗದ ಪರವಾಗಿ ಶುಭವನ್ನು ಕೋರುತ್ತದೆ. ಶ್ರೀಯುತರ ಹೆಚ್ಚಿನ ವ್ಯಕ್ತಿ ಪರಿಚಯವನ್ನು ಸಂಗಾತಿ ಸಂಪುಟ 2 ಸಂಚಿಕೆ 21ರಲ್ಲಿ ಪ್ರಕಟಿಸಲಾಗಿದೆ.

– ಪಟ್ಟಡ ಪ್ರಭಾಕರ

---

## ದೀಪಾವಳಿ ಹಬ್ಬ

ಹಬ್ಬ ಈ ದೀಪಾವಳಿ ಹಬ್ಬ
ನಾಡಿನ ಸಿರಿಯ ಹಬ್ಬ
ತರಲಿ ಎಲ್ಲರಿಗೂ ಸೊಬಗ
ಕಾರ್ತಿಕ ಮಾಸದ ಹಬ್ಬ
ಈ ಸುಂದರ ದೀಪದ ಹಬ್ಬ
ದೀಪದ ಸಾಲುಗಳ ಹಬ್ಬ
ಪಟ ಪಟ ಪಟಾಕಿಯ ಹಬ್ಬ
ಸಂತೋಷ ಸಂಭ್ರಮದ ಹಬ್ಬ
ನಮ್ಮ ಪ್ರೀತಿಯ ದೀಪಾವಳಿ ಹಬ್ಬ
ಕತ್ತಲನ್ನು ತೊರೆದು ಬೆಳಕನ್ನು ನೀಡುವ ಹಬ್ಬ
ರಾಕ್ಷಸೀ ಅಂಶವನ್ನು ತೊರೆದು
ದೈವತ್ವದ ಹೊಂಬೆಳಕನ್ನು ಹರಿಸುವ ಹಬ್ಬ
ಬಾಲವೃದ್ಧರೂ ಆಚರಿಸುವ ಹಬ್ಬ
ನಮ್ಮ ನೆಚ್ಚಿನ ದೀಪಾವಳಿ ಹಬ್ಬ
ಹಿರಿ ಹಿರಿ ಹಿಗ್ಗುವ ಹಬ್ಬ
ತಕ ತಕ ಕುಣಿಯುವ ಹಬ್ಬ
ಸಿಹಿ ತಿಂಡಿಗಳ ದೀಪಾವಳಿ ಹಬ್ಬ
ರಾಷ್ಟ್ರದ ಎಲ್ಲಾ ಕಡೆಯೂ
ಹರ್ಷದ ಹೊನಲನ್ನು ಸುರಿಸುವ ಹಬ್ಬ
ದೀಪಾವಳಿ ಹಬ್ಬ, ಸುಂದರ ಹಬ್ಬ
ಎಲ್ಲರ ಪ್ರೀತಿಯ, ನೆಚ್ಚಿನ ಹಬ್ಬ
ಪ್ರತಿಯೊಬ್ಬರ ಮನಸ್ಸನ್ನು ಹರ್ಷಿತ ಹಬ್ಬ
ಪುಟಾಣಿಗಳ ಆಟದ ಹಬ್ಬ

**ಉಳುವಾರನ ಧನುಜ ಜನಾರ್ಧನ್, ಕುಶಾಲ ನಗರ**



# ನಮ್ಮ ಲೇಖಕರ ಪರಿಚಯ :

ಶಂಕರನ ಬಸಪ್ಪ

ಶಂಕರನ ಬಸಪ್ಪನವು ಮೈಸೂರಿನ ಕುಂಬಾರಕೊಪ್ಪಲುನಲಿ ವಾಸ ಒಳೊ. ಇವು ಕೊಡಗ್‌ನ ಬಲ್ಲಮಾವಟಿಗ್ರಾಮದ ಶಂಕರನ ಮುತ್ತಪ್ಪ ಪೂವಮ್ಮ ದಂಪತಿಗಳ ನಾಲ್ಕನೇ ಮಂಙ ಆಗಿ 1947ನೇ ಇಸವಿಲಿ ಜನಿಸೊಳೊ. ಇವು ಹತ್ತನೇ ಕ್ಲಾಸ್‌ನ ನಾಪೋಕ್ಲು ಹೈಸ್ಕೂಲ್‌ಲಿ, 1965ನೇ ಇಸವಿಲಿ ಮಾಡ್ರೊ. ಮತ್ತೆ ಇವು 1965ನೇ ಇಸ್‌ವಿಲಿ ಬರೀ ಕೈಲಿ ಕೆಲ್ಸ ಹುಡುಕಿಕಂಡ್ ಮೈಸೂರಿಗೆ ಬಂದೊ. ಈಗ ಮೈಸೂರ್‌ಲಿ ಹಂಗೊ ಮನೆ ಮಾಡಿಕಂಡ್ ಹೆಣ್ಣ್ ಮತ್ತೆ ಮೂರು ಜನ ಹೆಣ್ಣ್ ಮಕ್ಕಳೊಟ್ಟಿಗೆ ಸಣ್ಣ ಸಂಸಾರ ಮಾಡಿಕಂಡ್ ಸಂತೋಷಲಿ ಒಳೊ.

ಇವು 1965ರಿಂದ 1984ಕೆ ಮುಟ್ಟ 18 ವರ್ಷ ಕಾಲ ಸುನಂದ ಆಮೆಟಿಕ್ ಫ್ಯಾಕ್ಟರಿಲಿ ಒಳ್ಳೆ ಹುದ್ದೆಲಿ ಇದ್ದ್ ಅಲ್ಲಿ ಹಲವಾರ್ ತರದ ಕೆಲ್ಸ, ಕಾರ್ಯ, ವ್ಯವಹಾರಗನ್ನ ಕಲ್ತ್‌ಕಂಡೊಳೊ. ನಂತರ ಇವು ಸ್ವಂತ ಇಂಜಿನೀಯರಿಂಗ ವರ್ಕ್‌ಶಾಪ್‌ನ ಮಡ್‌ಗಿದ್ದು ಮೈಸೂರಿನ ಕುಂಬಾರ ಕೊಪ್ಪಲ್ ಟೋಲ್‌ಗೇಟ್ ಹತ್ರ. ತಮ್ಮ ಸಂಸಾರನ ಖಾಯಂ ಸಪ್ಲೆಮೆಂಟ್ ಮಾಡಿಕಂಡೊಳೊ.

ಇವು 1966ನೇ ಇಸ್ವಿಯಿಂದಲೂ ಅಂದ್‌ನ ಶಿರಗಜೆ ದೇವಯ್ಯನಪ್ರ ಜೊತೆಗೂಡಿ ಕೊಡಗು ಗೌಡ ವಿದ್ಯಾಸಂಘದ ಕಮಿಟಿಲಿ ಒಬ್ಬ ಮೆಂಬರಾಗಿ ಇದ್ದ್‌ಕಂಡ್ ನಮ್ಮ ಗೌಡ ಸಂಘದ ಜಾಗದ ಖರೀದಿ ಸಮಯಲಿ ಮತ್ತೆ ಕಟ್ಟಡ ಕಟ್ಟುವ ಸಮಯಲಿ ಈ ಕಮಿಟಿಯ ಮುಖಾಂತರ ಕೆಲ್ಸ ಮಾಡ್ಯೊಳೊ. ಇವು ಬಾಲ್ಯಲಿ ಹೆಚ್ಚಿಗೆ ವಿದ್ಯೆ ಓದದಿದ್ದರೂ ಇವು ಮೆಕಾನಿಕಲ್ ಕೆಲ್ಸದ ಬಗ್ಗೆ ಬಹಳ ಆಸಕ್ತಿನ ವಹಿಸಿಕಂಡ್ ಇದೇ ದಾರಿಲಿ ಮುಂದೆ ಸಾಗ್‌ತಾ ಕೃಷಿ ಕೆಲಸಗಳಿಗೆ ಸಮ್ಮಂದ ಪಟ್ಟಂತಹ ಕೆಲವು ಹೊಸ ಹೊಸ ಯಂತ್ರಗಳ ಆವಿಷ್ಕಾರಗಳ್ನ ಬಹಳ ಮಾಡ್ಯೊಳೊ. ಆದ್ರೆ ಇವು ಕಂಡ್ ಹಿಡ್ದ ಯಂತ್ರಗ ಇನ್ನೂ ಮಾರ್ಕೆಟಿಗೆ ಪರಿಚಯ ಆತ್‌ಲ್ಲೆ. ಆದ್ರೂ ಇವು ನಮ್ಮ ಬಡ ಕೃಷಿಕ ಜನರ ವ್ಯವಸಾಯ ಕೆಲ್ಸಕೆ ಅನುಕೂಲ ಆಗುವಂತ ಯಂತ್ರಗಳ್ನ ಪರಿಚಯ ಮಾಡಕ್ಕುತ್ತೇಳುವ ಆಸೆನ ಇಟ್ಟುಕಂಡ ಒಬ್ಬ ಮಹತ್ವಾಂಕ್ಷಿ.

ಇಷ್ಟೇ ಅಲ್ಲದೆ ಇವು ಕತೆ, ಕಾದಂಬರಿ, ಕವನ, ವೈಜ್ಞಾನಿಕ ಲೇಖನಗಳನ್ನ ಕೂಡಾ ಬರಿಯುವಂತವು ಆಗೋಳೊ. ಇವರ ಕೆಲವು ಬರವಣಿಗೆ ಮತ್ತೆ ಕವನಗ ನಮ್ಮ ಕೊಡಗು ಸಂಗಾತಿಲಿ ಪ್ರಸಾರ ಆಗಿ ಈಗಾಗಲೇ ನಮ್ಮ ಓದುಗರಿಗೆ ಪರಿಚಯ ಆಗ್ಯೊಳೊ. ಇವರ "ವಾಂಟೆಡ್ ಮಿಸ್ಟರ್ ರಾಜು" ಅರೆಭಾಷೆಲಿ ಧಾರವಾಹಿಯಾಗಿ ನಮ್ಮ ನಾಡ್‌ನ ಮಕ್ಕಳಿಗೆ ಒಳ್ಳೆ ಮಾರ್ಗದರ್ಶನ ಆಗುತ್ತೇಳುವ ಉದ್ದೇಶದಿಂದ ನಮ್ಮ ಕೊಡಗು ಸಂಗಾತಿ ಪಾಕ್ಷಿಕಲಿ ಹಂತ ಹಂತವಾಗಿ ಪ್ರಕಟಿಸಿವೆ. ಅರೆಭಾಷೆಲೂ, ಕನ್ನಡಲೂ ಬಹು ಮುಖದ ವಿಚಾರಗಳ ಲೇಖನಗಳನ್ನ ಬರಿಯುತಕ್ಕ ಇವರಿಂದ ಇನ್ನೂ ಹೆಚ್ಚ್ ಹೆಚ್ಚ್ ಒಳ್ಳೆ ವಿಚಾರಗಳ ಲೇಖನಗ ಸಂಗಾತಿಗೆ ಸಿಕ್ಕುವಂತೆ ಆಗಲಿತ್ತೇಳಿ ಆ ಭಗವಂತನನ್ನ ಸಂಗಾತಿ ಪ್ರಾರ್ಥಿಸಿ ಶುಭ ಕೋರಿದೆ.

– ಸಂಪಾದಕ

---

## ಗೌಡ ಕನ್ನಡ ತ್ರಿಪದಿಗಳು

ಗಂಡೀಗೆ ಹೆಣ್ಣ್ ಹೆಣ್ಣೀಗೆ ಗಂಡ್
ಸಂಸಾರ ಸಾರ ಇದ್ ಗುಟ್ಟು ||ಸಂಸಾರ||
ಜಾಣ ಮಕ್ಕಂಳ್ನ ಕುಲಕೆ ಹೆಸ್ರುಟ್ಟು ||೧||

ಹೆಂಡಾನ ಹೀರಿ ದಾರೀಲಿ ಬೀಳ್ಬಾಡ
ಹೊತ್ತಾಗಿ ಮನೆಗೆ ಬರ್‍ಬ್ಯಾಡಾ ||ಹೊತ್ತಾಗಿ||
ಹೆಂಡ್ತೀಗೆ ಏಟ್ ಕೊಡ್ಬ್ಯಾಡಾ ||೨||

ಬಣ್ಣ ಬಂಗಾರಲಿ ಏನುಟ್ಟು ಮಣ್ಣ್
ಇರುದೆಲ್ಲಾ ನಿನ್ನ ಕೆಲ್ಸಲಿ ||ಇರುದೆಲ್ಲ||
ಬಾಳ್‌ಲಿ ನೀತೀನ ಮಾತ್ರಾ ಬುಡ್ಬ್ಯಾಡಾ ||೩||

ನೆರೆಕರೆ ಮನೆಬೇಕು ಕರೆಕಾನ ಬರೊವಾಕು
ಕಿರಿ ಕಿರಿ ಮಾತ್ ಬರೆ ಹಾಳ್ ||ಕಿರಿ ಕಿರಿ||
ಮೊನ್ನಾನ ಪಿರಿ ಪಿರಿ ಮಾತ್ರ ಮನೆಹಾಳ್ ||೪||

ಆ ಜಾತಿ ಈ ಜಾತಿ ದೂರುದು ಬ್ಯಾಡ
ಜಾತಿ ಜಗಳ ನಾವ್‌ಗ್ಯಾಕ ಜಾತಿ ||ಜಗಳ||
ನಾವ್ ಇರುವಷ್ಟ್ ಕಾಲ ಲ್ಯಾಕಿರೋನು ||೫||

ಹುಟ್ಟಿದ ಮನೆಯಾವ್ದೋ ಹತ್ತಿದ ಮನೆಯಾವ್ದೋ
ಭತ್ತದ ಗಿಡಿದಾಂಗೆ ಹೆಣ್ ಮಕ್ಕಾ ||ಭತ್ತದ||
ಮೆಟ್ಟೀದ ಮನೆಲೀ ಗಟ್ಯಾಗಿ ||೬||

ಮೈ ಮುರ್‍ದು ಗೈದಾರೆ ಕೈಯಾರೆ ಉಣಕಣ್ಣಾ
ಮೈ ಮುರ್‍ದು ದುಡಿಮೆ ಹಾಳಲ್ಲಾ ||ಮೈಮುರ್‍ದು||
ತಲೆ ಹಿಡ್ದ ಚಿಂತೆ ಹಾಳಣ್ಣಾ ||೭||

ಯು. ಸುಬ್ರಾಯ ಗೌಡ
ಗುತ್ತಿಗಾರು, ಉಪನ್ಯಾಸಕ. ಸಂ.ಪ.ಪೊ. ಕಾಲೇಜು, ಬೆಳ್ಳಾರೆ.

# ನಾ ಕಂಡಂಗೆ ಕಾವೇರಿ ನಾಡ್

ಅಂದ್ ನಾ ಆಫೀಸ್‌ಲಿ ಕೆಲ್ಸ ಮಾಡಿಕಂಡ್ ಇರ್‌ಕನ ಕಾವೇರಿ ನಾಡ್‌ನ ಸೃಷ್ಟಿಕರ್ತ ಶ್ರೀ ಅಮ್ಮಾಜೀರ ಪೊನ್ನಪ್ಪನವ್ರು, ಶ್ರೀ ಪಳ್ಳಿಪುರ ಭರತ್‌ನವ್ರು ಮತ್ತೆ ಶ್ರೀ ಕಾಚಿಲಂಡ ಅಶೋಕ್‌ನವ್ರು ಬಂದ್ ತಾರೀಕ್ 12-9-1999ಕ್ಕೆ ಬೆಂಗಳೂರ್‌ನ ನೆಲಮಂಗಲದ ಕಾವೇರಿನಾಡ್‌ಲಿ ಕೈಲ್‌ಪೊದು ನೀವು ಬಂದೇ ಬರೊಕು. ಕಾರ್ಯಕ್ರಮನ ಸದ್ದಿ ಕೊಡೊಕು ಹಂಗೆ ಮುಖ್ಯ ನೆಂಟ್ರಾಗಿ ಬನ್ನಿತ್ತೇಳಿ ಕಾಗದ ಕೊಟ್ಟ್ ಹೋದೊ. ಹೋಕನ ಕಾವೇರಿನಾಡ್‌ಗೆ ಹೋಕೆ ಬಸ್ ಏರ್ಪಾಡ್ ಉಟ್ಟುತ್ತೇಳ್ಳೊ. ನಂಗೆ ತಲೆ ಬಿಸಿಯಾತ್ ಯಾಕೆತ್ತೇಳ್‌ರೆ ಸುಟ್ಟ ಇಲೆಕ್ಷನ್‌ಗೆ ನಂಗೆ ಡ್ಯೂಟಿ ಹಾಕಿದ್ದೊ. ಹೆಂಗಾರ್ ಮಾಡಿ ಡ್ಯೂಟಿನ ಕ್ಯಾನ್ಸಲ್ ಮಾಡ್ಸಿಕ್ಕಂಡಾರ್ ಅಂದ್‌ನ ಸಮಾರಂಭಕ್ಕೆ ಹೋಕುತ್ತೇಳಿ ಗ್ಯಾನ ಮಾಡಿಕ್ಕಂಡ್ ಬಾಳ ಪೇಚಾಟಂದ ಇಲೆಕ್ಷನ್ ಡ್ಯೂಟಿ ಕ್ಯಾನ್ಸಲ್ ಮಾಡ್ಸಿದೆ. ಕಡೆಗೆ ಬಸ್ ಏರ್ಪಾಡ್‌ದ್ ಜನಕಾಣದಾಕ್ಕನ ನಾನ್ ಸರ್ಕಾರಿ ಬಸ್ಸ್ ಗತಿತ್ತೇಳಿ ತೀರ್ಮಾನ ಮಾಡಿಕ್ಕಂಡೆ. ನಾನ್ 11ರ ಬೆಳಿಗ್ಗೆ ಬಸ್ ಹತ್ತಿದೆ. ಸಾಯಂಕಾಲ ಬೆಂಗಳೂರ್ ತಲ್ಪಿ ನನ್ನ ಭಾವ ಶ್ರೀ ಕೆದಂಬಾಡಿ ಸರೋಜ ಸುರೇಶ್ ಇವರಲ್ಲಿ ಒಳ್ಕಂಡೆ. ಇವು ಪೀಣ್ಯದ ಹೆಗ್ಗನ ಹಳ್ಳಿಲಿ ಇರ್‍ದು.

ಆ ಪ್ರಕಾರ ನಾನ್, ಭಾವನು 12ರ ಬೆಳಿಗ್ಗೆ 7-50ಗಂಟೆಗೆ ಜಾಲಹಳ್ಳಿ ಕ್ರಾಸ್‌ಲಿ ಹೋಗಿ ನಿಂತ್‌ಕಂಡೊ. ಸ್ವಲ್ಪ ಹೊತ್ತಿಗೆ ನಮ್ಮವು ನಮ್ಮಂಗೆ ಕೈಲ್ ಪೊದ್‌ಗೆ ಬಂದವೈತ್ತೇಳಿ ಅಲ್ಲಿ ಬಂದವರ್ನ ನೋಡ್‌ಕನ ಗೊತ್ತಾತ್. ಕಾಗದಲಿ ಬೆಳಿಗ್ಗೆ 9-00 ಗಂಟೆಗೆ ಹಬ್ಬ ಸುರುತ್ತೇಳಿ ಉಟ್ಟು, ನಮ್ಮನ ಕರ್‌ಕಂಡ್ ಹೋಗುವ ಎರಡ್ ಬಸ್ಸ್‌ಲಿ ಬಿಳಿ ಬ್ಯಾನರ್‌ಲಿ ಕಾವೇರಿನಾಡು ಕೈಲ್ ಮುಹೂರ್ತಕೆತ್ತೇಳಿ ಬರ್‍ಕಂಡ್ ಬಾತ್. ನಾವೆಲ್ಲಾ ಅದ್‌ಕೆ ಹತ್ತಿದೊ. ಬಸ್ಸೊಳಗೆಲ್ಲಾ ನಮ್ಮೊವು. ನಮ್ಮವೇ ಒಂದ್ ರೀತಿ ಸಡಗರ ಇತ್ತ್. ಬೆಂಗಳೂರ್‌ಂದ 40 ಕಿ. ಮೀ ದೂರಲಿ ನೆಲಮಂಗಲ ತಾಲೋಕಿನ ಕುಣಿಗಲ್ ಕಡೆ ಹೋಕನ 5ಕಿ. ಮೀ ದೂರಲಿ ಕಾಡ್‌ಕರೇನ ಹಳ್ಳಿ. ಮುಖ್ಯ ರಸ್ತೇಂದ ಎಡಕ್ಕೆ ತಿರ್‌ಗಿ ಮಣ್ಣ್ ರಸ್ತೆಲಿ 1 ಕಿ. ಮೀ. ಒಳಗಡೆ ನಮ್ಮನ ಹೊತ್ತ್‌ಕಂಡ್ ಸುಖಾಸೀನ ಬಸ್, ಉಯ್ಯಾಲಾಡಿಸಿಕಂಡ್ ಹೋಗಿ ತಲ್‌ಪ್‌ಕನ ಗಂಟೆ 9-15 ಕೊಡ್‌ಗ್‌ನ ವಾಲಗ ಸಮೇತ ಬಸ್ಸಿಲಿದ್ದವರ್ನ ವೇದಿಕೆನ ಚಪ್ಪರದಡಿಗೆ ಕರ್‌ಕಂಡ್ ಹೋಕನ ಮೈಲಿ ರೋಮಾಂಚನಗೊಂಡ ಕುಸಿ ಆತಿತ್. ಒಂದು ಪಳೆಂಟ್ ಕುಪ್ಪಸದಟ್ಟಿ ಹಾಕಿದವು ಮತ್ತೆ ಗೇಂಟಿಗೆ ಕಟ್ಟಿದವು ನಮ್ಮನ ಲಾಯಕ್ಕಾಗಿ ಬರ ಮಾಡಿಕ್ಕಂಡ್ ಕಾಫಿ ತಿಂಡಿಗೆ ದಾರಿ ತೋರ್‍ಸಿದೊ. ಮರದ ಸಂಪಟಿಗಳ್‌ಂದ ಮಾಡ್ದ ಸಾಲಾಗಿ ನಿಂತ್‌ಕಂಡ್ ಬೆಳಗ್ಗೆನ ಉಪಹಾರ "ಉಪ್ಪಿಟ್ಟು" ಮತ್ತೆ ಇಷ್ಟಪಟ್ಟವ್ರ ಅದರೊಟ್ಟಿಗೆ ಸ್ಪೆಷಲ್ಲ್ ಉದುಕ ಹಾಕಂಡ್ ತಿಂದೊ ! ಸುಮಾರ್ 10 ಗಂಟೆ ಹೊತ್ತಿಗೆ ಬ್ಯಾರೆ ಬಾಸ್‌ಲಿ ಮತ್ತೆ ಸ್ವಂತ ವಾಹನಗಳಲಿ ಸಾಕಷ್ಟ್ ನಮ್ಮವು ಬಂದೊ. 9-00 ಗಂಟೆಗೆ ಜ್ಯೋತಿ ಬೆಳಗುವ ಕಾರ್ಯಕ್ರಮ 10ಗಂಟೆಗೆ ಸುರಾತ್. ಇದರ ಉದ್ಘಾಟನೆಗೆ ಗುಡ್ಡಮನೆ ರಮೇಶ್‌ನವು ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿನ "ಉಪಾಧ್ಯಕ್ಷರಾಗಿ ಮಡಿಕೇರಿಂದ ಮುಖ್ಯ ನೆಂಟ್ರಾಗಿ ಬಂದಿದ್ ಮಾಡೊಕುತ್ತೇಳಿ ಸದ್ದಿ ಸಮಾರಂಭಕ್ಕೆ ಬಂದಿದ್ದ ಸಣ್ಣ ಕೂಸಾದ ಮೂರು ತಿಂಗಳ ಅಣ್ಣಾಚೀರ ಚೈತ್ರ ಶಿವಕುಮಾರ್ ಹಂಗೆ ಕಲ್ಲುಮುಟ್ಲು ದಿವ್ಯ ಬಸಪ್ಪನವು ಏಳು ತಿಂಗಳ ಕೂಸುನ ಕೈಲಿ ಮುಖ್ಯ ನೆಂಟ್ರ್ ಗುಡ್ಡೆಮನೆ ರಮೇಶ್‌ನವು ಜ್ಯೋತಿ ಬೆಳ್‌ಗಿಸಿದೊ.

ಕಟ್ಟಡದ ಮುಂದ್‌ಗಡೆ ದೊಡ್ಡ ವೇದಿಕೆ ಇತ್ತ್. ಬಲಕ್ಕೆ ಕಾವೇರಿ ಗುಡ್ಡದ ನಿರ್ಮಾಣ, ಕಾವೇರಿ ಮಾತೆ ಎಡಕ್ಕೆ ಐಯ್ಯಪ್ಪ ಗುಡಿ, ಬಲಕ್ಕೆ ಗಣಪತಿ ಗುಡಿ, ಮಧ್ಯಲಿ ಕಾವೇರಿ ಮಾತೆ. ಕಾವೇರಿ ಹೊಳೆ ಹರ್‌ನವ ದೃಶ್ಯ ನೋಡ್‌ಕೆ ಎರಡ್ ಕಣ್ಣ್ ಸಾಲ್ದ್. ವೇದಿಕೆ ಮುಂದೆ ದೊಡ್ಡ ಶಾಮಿಯಾನದ ಸುಮಾರ್ 1000 ಜನ ಕೂರ್‌ವಸ್ಟ್ ಚಪ್ಪರದ ವ್ಯವಸ್ಥೆ, ಸಂಗೀತ, ವಿಡಿಯೋಗ ಹಂಗೆ ಎಡಕ್ಕೆ "ಅಣ್ಣಂದರ್‌ಗೆ ಕಳ್ಳ್ ಟ್ಟು ಕುಡ್ದ್ ಕುಣಿದಾಡಿ" "ಅಕ್ಕಂದರ್‌ಗೆ ವೈನ್ ಉಟ್ಟು ಕುಡ್ದ್ ಕುಸಿ ಪಡಿ" ತ್ತೇಳ್ವ ಎರಡ್ ನಾಮಫಲಕಗ, ಎಲ್ಲವರ್ನ ಕೈ ಬೀಸಿ ಕರೆಯಿತಿತ್ತ್. ಕಾವೇರಿ ನಾಡ್ ಆಂಗ್ಲ, ಮಾಧ್ಯಮ ಶಾಲೆ, ಕಟ್ಟಡಲಿ ಆರು ಕೋಣೆಗೆ ಇದ್ದ್. ಆರನೇ ಕ್ಲಾಸ್‌ವರೆಗೆ ವಿದ್ಯಾಭ್ಯಾಸ ನಡ್ದ್‌ದೆತ್ತೇಳಿ ಗೊತ್ತಾತ್. ಸ್ಕೂಲ್ ಹಿಂದೆ, ಖಾಲಿ ಜಾಗ ಸ್ಪೇಟಾಗಿ ಮಾರ್ಪಾಡಾಗುಟ್ಟುಗಡ. ಇದರ ಎರಡ್ ಬರಿಲಿ ನೀಲಗಿರಿಮರದ ತೋಟಗ. ಒಂದ್ ಮರಕ್ಕೆ ಮೂರು ತೆಂಗ್‌ನ ಕಾಯಿ ಕಟ್ಟಿದ್ದ್ ಊಟಾದ ಮ್ಯಾಲೆ ಗುರಿ (ಗುಂಡ್) ಹೊಡೆಯೊದುತ್ತೇಳ್ಳೊ. ಕಾರ್ಯಕ್ರಮ ಗುಡ್ಡೆಮನೆ ರಮೇಶ್‌ನವರ ಉದ್ಘಾಟನೆ ಭಾಷಣ ಮತ್ತೆ ಶ್ರೀಮತಿ ಬಿಟ್ಟೀರ ಶಂಭು ಚೋಂದಮ್ಮನವರ ದೇವರ ಪದ್ಯ ಹಾಡೊಟ್ಟಿಗೆ ಸುರಾತ್. ಸುಮಾರ್ ಮಧ್ಯಾಹ್ನ 2-00 ಗಂಟೆವರೆಗೆ ವಿವಿಧ ವಿಭಿನ್ನ ಸಂಸ್ಕೃತಿಗಳ ಕಾರ್ಯಕ್ರಮ ಬಾಳ ಲಾಯಕ್ಕಾಗಿ ನಡ್ತ್. ಮಿಶ್ರ ಜೋಡಿ (ಗಂಡ್ ಹೆಣ್ಣ್) ನಿರೂಪಣೆಗಾರರ್ ಬಾರಿ ಲಾಯಕ್ಕಾಗಿ ಕಾರ್ಯಕ್ರಮ ನಿರೂಪಿಸಿದೊ. ಆದರೆ "ಗೌಡ ಸಂಸ್ಕೃತಿಗೆ ಸಂಬಂಧಿಸಿದ ಯಾವುದೇ ಐಟಂಗಳ ಪ್ರದರ್ಶನ ಇಲ್ಲದಿದ್ದದ್ ಒಂದ್ ದುರಂತ. ನಾವೆಲ್ಲಾ ನಮ್ಮ ಸಂಸ್ಕೃತಿ ಬಗ್ಗೆ ಬಾರಿ ಮಾತಾಡವ್ರು, ಪಾಶ್ಚಿಮಾತ್ಯ ಸಂಸ್ಕೃತಿಗೆ ಗೊತ್ತಿಲ್ಲದೆ ಪರೋಕ್ಷವಾಗಿ ಶರಣಾಗೊಳೊ ! ಸಾಂಸ್ಕೃತಿಕ ಕಾರ್ಯಕ್ರಮ ಮುಗ್ದಂಗೆ ಕಾವೇರಿ ಗುಡ್ಡದ ಉದ್ಘಾಟನೆನ ಶ್ರೀ ಗಂಗ ಹನುಮಯ್ಯನವು ಇತರ ಮುಖ್ಯ ನೆಂಟ್ರೊಟ್ಟಿಗೆ ರಿಬ್ಬನ್ ಕತ್ರಿಸಿ ಉದ್ಘಾಟನೆಗೆ ಮಾಡ್ರೊ.

ಇದರ ಜೊತೆಗೆ ಕಾರ್ಯಕ್ರಮ ನಡ್ಕಂಡಿರ್‌ಕನ ಕೆಲವರ್ದ್ ನೀಲಗಿರಿ ಮರ ತೋಟದೊಳಗೆ ಕಳ್ಳ್ ಕುಡ್ಯೊ ಸಂಸ್ಕೃತಿ ನಡೆತಿತ್ತ್ ! ಹಂಗೆ ಮಧ್ಯೆ ಮಧ್ಯೇಲಿ ಬಂದವ್ರ ಎದ್ದ್‌ಕಂಡ್ ಅತ್ತಿತ್ತ ತಿರ್‌ಗಾಡ್ದು. ಕುದ್ದಲ್ಲಿ ಕೂರುದಲೆ, ಎಲ್ಲೆಲ್ಲೊ ನಿತ್ತ್‌ಕ್ಕಂಡ್, ಪರಿಹಾಸ್ಯ, ಗೇಲಿ ಮಾಡ್‌ತ್ತಿದ್ದವು ನಮ್ಮ ಇನ್ನೊಂದು ಸಂಸ್ಕೃತಿ ಮತ್ತೆ ನಮ್ಮಲ್ಲಿನ ಶಿಸ್ತ್‌ನ ಪ್ರದರ್ಶನ. ಸುಮಾರ್ ಮಧ್ಯಾಹ್ನದವರೆಗೆ ನಮ್ಮವು ಬಂದ್‌ಕಂಡೇ ಇದ್ದೊ ! ಮತ್ತೆ ಸಭೆ ಎರಡು ಗಂಟೆಗೆ ಸುರಾತ್ ಅದೇ ಊರ್‌ನ ಪಂಚಾಯತ್ ಅಧ್ಯಕ್ಷ ಶ್ರೀ ಗಂಗ ಹನುಮಯ್ಯನವ್ರ

✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦✦

ಅಧ್ಯಕ್ಷತೆ ವಹಿಸಿದ್ದೊ. ಮುಖ್ಯ ನೆಂಟ್ರಾಗಿ ಶ್ರೀ ದಂಬೆಕೋಡಿ ಆನಂದ, ಶ್ರೀ ಗುಡ್ಡೆಮನೆ ರಮೇಶ್, ಶ್ರೀ ಪಟ್ಟಡ ಪ್ರಭಾಕರ್, ಶ್ರೀ ಬೈತಡ್ಕ ಚೋಯಪ್ಪ, ಶ್ರೀ ಅಮೆ ಸೀತೆರಾಮ್, ಶ್ರೀ ಕೊಂಪುಳಿರ ಗಣೇಶ್ ಊರ್‌ನ ನಂಜಪ್ಪನವು ಬ್ಯಾರೆ ಯಾರೆಲ್ಲೊ ಇದ್ದೊ. ಶ್ರೀ ದಂಬೆಕೋಡಿ ಆನಂದನವು ಕೈಲ್ ಮುಹೂರ್ತದ ಹಬ್ಬದ ಬಗ್ಗೆ ಮಾತಾಡ್‌ರೆ, ಶ್ರೀ ಗುಡ್ಡೆಮನೆ ರಮೇಶ್‌ನವು ಕಾವೇರಿನಾಡು ಸೃಷ್ಟಿಕರ್ತ ಅಮ್ಮಾಜೀರ ಪೊನ್ನಪ್ಪನವರ ಶ್ರಮ, ತ್ಯಾಗ, ಉದ್ದೇಶ, ಜನಾಂಗ ಸೇವೆ ತನ್ನ ಗೌಡರ ಏಳಿಗೆಗಾಗಿ ತೊಡಗಿಸಿಕ್ಕಣ್‌ದ್ ಮತ್ತೆ ಗೌಡ ಜನಾಂಗದ ಸ್ಥಾನ ಮಾನ ಹಂಗೆ ಪೊನ್ನಪ್ಪವು ವ್ಯಾಪಾರಿ ಮನೋಭಾವದವರಾಗದೆ, ಮುಗ್ಧ ಜನ ಶೋಷಣೆ ಒಳಗಾಗದಿರಲಿತ್ತೇಳ್ವ ಕಿವಿಮಾತ್‌ನೊಂದಿಗೆ ಭಾಷಣ ಮಾಡ್ದೊ.

ಅಧ್ಯಕ್ಷ ಸ್ಥಾನಂದ ಶ್ರೀ ಗಂಗ ಹನುಮಯ್ಯನವು ಮಾತಾಡಿ, ನಮ್ಮ ಗೌಡ ಜನಾಂಗದ ಕೂಟ ನೋಡಿ, ಕುಸಿಯಾಗಿ ತಮ್ಮ ಹೃದಯ ವಂತಿಗೆನ ತೋರ್ಸಿಕಂಡ್ ಪೊನ್ನಪ್ಪನವರ ಸಾಧನೆಗೆ ಮೆಚ್ಚಿ ತಾವು ಕೂಡ ಕಾವೇರಿ ನಾಡ್‌ನ ಸರ್ವತೋಮುಖ ಅಭಿವೃದ್ಧಿಗೆ ಎಲ್ಲಾ ರೀತಿಯ ಸಾಯ ಮಾಡ್ನೇತ್ತೇಳಿ ಮಾತ್ ಕೊಟ್ಟೊ. ಹಂಗೆ ಅವರ ಮಾವ ನಂಜಪ್ಪನವು ಅರ್ಧ ಎಕ್ರೆ ಭೂಮಿನ ಬುಟ್ಟ್ ಉದಾರವಾಗಿ ರಸ್ತೆ ಮಾಡಿ ಕೊಟ್ಟನೆತ್ತೇಳ್ದೊ. ಇದ್ನೆಲ್ಲ ಕೇಳ್ದ್ ನಮ್ಮ ಜನ ಹರ್ಷೋದ್ಗಾರತೆಗ್ದೊ. ಜೊತೆಗೆ ನಮ್ಮ ಸಂಸ್ಕೃತಿ ಮತ್ತೆ ನಮ್ಮಲ್ಲಿ ಬಾರಿ ಹೃದಯ ಸಂಪತ್ತು ಉಟ್ಟುತ್ತೇಳಿ ಲಾಯಕ್ಕಾಗಿ ಹೆಣ್ಮಕ್ಕಳ ನೋಡಿಕಂಡ್ ನಮ್ಮ ಊರಿಗೆ ಎಲ್ಲವರ್‍ನ ಮೊದುವೆ ಮಾಡಿಕ್ಯಂಡ್ರೆ ನಮ್ಮ ಸಂಸ್ಕೃತಿನ ಅಪ್ಪಾಸ ಕಲ್ತ್‌ಕ್ಕಣಕ್‌ತ್ತೇಳಿ ತಮಾಸಿಯಾಗಿ ಹೇಳ್ಕನ ಅಲ್ಲಿ ನೆಗಾಡದವ ಯಾರು ಇಲ್ಲೆ! ಒಟ್ಟಾರೆ ಈ ಶತಮಾನದ 'ಕಾವೇರಿನಾಡ್' ಕಡೇ ಕೈಲ್ ಮುಹೂರ್ತ ಜನಾಂಗದ ನಿಜವಾದ ಸಂಸ್ಕೃತಿಂದ ವಂಚಿತರಾದರೂ ಬಟ್ಟೆಟ್ಟ್ ಹಂದಿ ಉದಕ ಕಳ್ಳ್ ಕುಡ್ದ್ ವಾಲಗದ ಕುಣ್ತ ಸಂಸ್ಕೃತಿಯೊಟ್ಟಿಗೆ ಲಾಯಾಕ್ಕಾಗಿ ಕಳ್ತ್. ಮುಖ್ಯ ನೆಂಟ್ರಾದ ನನ್ನನ ಪೊರೇನ ಜ್ಯೋತಿ ಪ್ರಕಾಶ್ ದಂಪತಿಗ ತಮ ಮಾರುತಿ ವ್ಯಾನ್‌ಲಿ ಕರ್‌ಕಂಡ್ ಮನೆಗೆ ಹೋಗಿ ಸತ್ಕರಿಸಿ ಕಳ್ಸಿದಕ್ಕೆ ಬಾರಿ ವಂದನೆಗ. ಅಮ್ಮಾಜೀರ ಪೊನ್ನಪ್ಪ ನೀಲಮ್ಮ ದಂಪತಿಗಳ ತ್ಯಾಗಮಯಿ ಸಹೃದಯಿ ಸ್ವಜನಶೀಲ ಜೀವನ ಜನಾಂಗಕ್ಕೆ ಆದರ್ಶಪ್ರಾಯವಾಗಿ ಈಗಿನ ಕಾವೇರಿ ನಾಡ್ ಮುಂದೆ ಗೌಡ ನಾಡಾಗಿ ಕಂಗೊಳಿಸಲಿತ್ತೇಳಿ ಎಲ್ಲವು ಹಾರೈಸನೊ.

ನಾನೊಬ್ಬ ಜನಾಂಗದ ಹಿತೈಷಿಯಾಗಿ ಕೆಲವು ಅಂಶಗಳನ್ನ ಓದುವವರ ಗಮನಕ್ಕೆ ತಾಕೆ ಇಷ್ಟ ಪಟ್ಟೆ.

### ಜನಂಗಾಕ್ಕೆ

೧. ಕೊಡ್‌ಗ್‌ನ ತಲಕಾವೇರಿಂದ ಸುಮಾರ್ 350 ಕಿ. ಮೀ. ದೂರಲಿ ಯಾರೂ ಗ್ಯಾನ ಮಾಡದ ಜಾಗಲಿ ಜನಾಂಗದ ಒಬ್ಬ ಸಾಧಾರಣ ಮೊನ್ನ "ಕಾವೇರಿ ನಾಡ್" ಸೃಷ್ಟಿ ಮಾಡ್ದ ಚರಿತ್ರೆ ಎಲ್ಲವು ಮೆಚ್ಚುವಂತದ್ದ್.

೨. ಅಮ್ಮಾಜೀರ ಪೊನ್ನಪ್ಪ ನೀಲಮ್ಮ ದಂಪತಿಗಳ ಪರಿಶ್ರಮ ತ್ಯಾಗ ಜನಾಂಗದ ಮ್ಯಾಲೆನ ಕಾಳಜಿ ಪ್ರತಿಯೊಬ್ಬರಿಗೂ ಮನ್ಸಿದ್ದರೆ ಮಾರ್ಗ ಸಾಧನೆಗೊಂದು ಮೈಲಿಗಲ್ಲ್.

೩. ಪೊನ್ನಪ್ಪನವು ತನ್ನ ತಂಗೆನ ಅಲ್ಲಿನ ಊರ್‌ಗೆ ಮದುವೆ ಮಾಡಿಕೊಟ್ಟ, ಒಂದೇ ನೆಪಲಿ ಅವ್‌ಕೆ ಸಿಕ್ಕಿದ ಕುಟುಂಬದ ಆಸ್ತಿನ ಪಾಲ್‌ನ ಪಡ್ದ್ ಬೇರೆ ಜನರಿಂದ ಜಾಗಗಳ್ನ ಪಡ್‌ಕಂಡ್ ಜನಾಂಗದ ನಾಡ್ ಕಟ್ಟ್‌ವ ಕನ್ಸ್ ಇಂದ್ ನನ್ಸಾಗಿ ಮನ್ನಣೆ ಪಡೆಯುತಿರ್ದು ಒಂದು ವಿಪರ್ಯಾಸ.

ನಮ್ಮ ಶ್ರೀಮಂತ ಭಾಷೆ 'ಅರೆಭಾಸೆ'ಲಿ ಕ್ಯಾಸೆಟ್ ಮೂಲಕ ಸಂಗೀತದ ಮಾಧುರ್ಯದ ಗಾನ ಹರ್ಸಿ ನಮ್ಮೆಲ್ಲರ ಹೃದಯದ ಬಡಿತದ ಏರಿಳಿತಗಳ್‌ಂದ ಮನ್ಸ್‌ನ ಕುಸಿ ಪಡ್ಸಿ ಸಂಗೀತ ಲೋಕಕ್ಕೆ ಕರೆದೊಯ್ದು ಒಬ್ಬ ಅಪೂರ್ವ ಕಲಾವಿದ.

೫. ಜನಾಂಗದ ಭವಿಷ್ಯತ್‌ನ ದೂರದೃಷ್ಟಿಲಿಟ್ಟ್‌ಕಂಡ್ ಜಾಗನ ಸೈಟ್‌ಗಳಾಗಿ ಮಾಡಿ ಇಷ್ಟವುಳ್ಳವ್‌ಕೆ ಕಮ್ಮಿ ಕ್ರಯಲಿ ಮಾರಾಟ ಮಾಡಿ ಅವ್‌ಕೆ ನೆಲೆ ಕಾಣ್ಸ್‌ತ್ತಿರ್ವ ಪ್ರಯತ್ನ ಶ್ಲಾಘನೀಯ.

### ಶ್ರೀ ಪೊನ್ನಪ್ಪನವುಕೆ

೧. ಪೊನ್ನಪ್ಪನವು ಮಾಡುತ್ತಿರ್ದು ಈ ಮಹಾತ್ಸಾಧನೆ ಜನಾಂಗದ ಸೇವೆಯಾಗಿರ್ಲಿ.

೨. ಜಾಗನ ಸೈಟಾಗಿ ಮಾಡಿ ನೀಡ್‌ದಕ್ಕೆ ಸರಿಯಾದ ದಾಖಿಲಾತಿಗಳನ್ನ ನೀಡ್ದು.

೩. ಜನ್ರ ಕೈಂದ ಪಡ್ದ ದುಡ್ಡುಗಳಿಗೆ ಸರಿಯಾದ ಲೆಕ್ಕಾಚಾರ ಇಡ್ದು.

೪. ಕ್ಯಾಸೆಟ್‌ಗಳ ಬೆಲೆ ತುಂಬಾ ದುಬಾರಿಯಾಗಿದ್ದ್ ಕಡಿಮೆ ಬೆಲೆಗೆ ಸಿಕ್ಕುವಂತಾಕು.

೫. ಯಾವುದೇ ಸಂದರ್ಭಲಿ ತಮ್ಮ ಸೇವೆತ್ತೇಳಿಕಂಡ್ ಜನಾಂಗದವರ್‍ನ ವ್ಯಾಪಾರ ದೃಷ್ಟಿಯಿಂದ ನೋಡದೆ ಮುಗ್ಧರ ಶೋಷಣೆ ಆಕಾಗದ್.

೬. ಜನಾಂಗವು ತಮ್ಮ ಮ್ಯಾಲೆ ಇಟ್ಟ ಆದರ, ಅಭಿಮಾನ, ಪ್ರೀತಿ, ವಿಶ್ವಾಸಗಳನ್ನ ಉಳ್ಸಿಕಂಬದು.

೭. ತಮ್ಮೆಲ್ಲ ವ್ಯವಹಾರಗಳ್ನ 'ಒಂದ್ ಟ್ರಸ್ಟ್' ಮೂಲಕ ಅಸಿತ್ವಕ್ಕೆ ತಂದ್ ವ್ಯವಹರ್ಸುದು ಸೂಕ್ತ ಕಂಡದೆ

೮. ಪ್ರತೀ ವರ್ಷ ನಡೆವ ತಮ್ಮ ಕಾರ್ಯಕ್ರಮದ ಸಮ್ಮಲಿ ಲೆಕ್ಕಪತ್ರಗಳ ಮಂಡನೆ ಮಾಡುದು ಒಳ್ಳದು ಮತ್ತೆ ವರ್ಷ ವರ್ಷ ಕೈಲ್ ಪೋಳ್ದ್ ಮಾಡ್ದು ಬ್ಯಾಡಕಂಡದೆ. ಕಾರಣ ಅದೇ ಹಣನ ಜನಾಂಗದ ಬ್ಯಾರೆ ವಿಷಯಕ್ಕೆ ಖರ್ಚು ಮಾಡಕ್.

ಕ್ಷಮಿಸಿ ಈ ಮ್ಯಾಲೆನ ಅಂಶಗ ಜನಾಂಗದವು ಮಾತಾಡುತಿರ್ದನ್ನ ಗಮನಿಸಿ ಅವರಲ್ಲಿರ್ದು ಸಂಶಯಗಳನ್ನ ದೂರ ಮಾಡುದಲ್ಲದೆ, ಯಾವ ಸಂಶಯಕ್ಕೆ ಎಡೆಯಾಕ್ಕಾಗದ್‌ತ್ತೇಳ್ದಕ್ಕೆ ಇಲ್ಲಿ ಬರೆಯೂದು ಅನಿವಾರ್ಯ ಆತ್.

ಒಬ್ಬ ಮೊನ್ನನ ಒಳ್ಳ ಕೆಲ್ಸದ ಹಿಂದೆ ಹತ್ತು ಹಲವ್ ಟೀಕೆ ಟಿಪ್ಪಣಿಗ ಇದ್ದವೆ. ಆದ್ರೆ ಯಾವುದೇ ಟೀಕೆ ಟಿಪ್ಪಣಿಗಳ್ನ ಹಗುರಾಗಿ ತಕ್ಕಣದೆ ಗಂಭೀರವಾಗಿ ಪರಿಗಣಿಸಿರೆ, ಅದ್ ಒಬ್ಬನ ಪರ್‌ಫೆಕ್ಟ್ ಮ್ಯಾನ್‌ತ ಮಾಡ್‌ದೆ !

ಲೇಖಕ : ಗುಡ್ಡೆಮನೆ ರಮೇಶ್, ಮಡಿಕೇರಿ



# ಮಡಿಕೇರಿ ಗೌಡ ಸಮಾಜದಲ್ಲಿ ಹುತ್ತರಿ ಹಬ್ಬವನ್ನು ಆಚರಿಸಿದರು



ಅಕಾಡೆಮಿ ನಿರ್ದೇಶಕ ಕರ್ಕರನ ಉತ್ತಯ್ಯನವ್ ಕದ್‌ರ್ ಕುಯ್ಯುವ ಚಿತ್ರ



ಕೂಡಕಂಡಿ ಅಪ್ಪಾಜಿಯವ್ರ ನೇತೃತ್ವಲಿ ನೆರೆ ಕಟ್ಟ್‌ವ ಚಿತ್ರ.

ಪ್ರಕೃತಿ ಸೌಂದರ್ಯದ ಬೀಡಾದ ಕೊಡಗು ದಕ್ಷಿಣದ ಕಾಶ್ಮೀರವೆಂದು ಪ್ರಸಿದ್ಧವಾಗಿರುವುದು. ಬೆಲೆ ಬಾಳುವ ಮರಗಳು, ಕಾಫಿ, ಯಾಲಕ್ಕಿ, ಒಳ್ಳೆ ಮೆಣಸು, ಕಿತ್ತಳೆ, ಬಾಳೆ ಮುಂತಾದವು ಉತ್ಕೃಷ್ಟವಾಗಿ ಬೆಳೆಯುವ ಪ್ರದೇಶ ಕೊಡಗು ಎಂದು ಉಲ್ಲೇಖಿಸಲು ಈ ಪುಣ್ಯ ಭೂಮಿಯಲ್ಲಿ ಜನಿಸಿದ ನಮಗೆ ಅಮಿತಾನಂದವಾಗುತ್ತದೆ. ಈ ನಾಡಿನಲ್ಲಿ ಕೊಡಗಿನ ಜನರು ಸಾಂಪ್ರದಾಯಿಕ ಹಬ್ಬಗಳನ್ನು ಆಚರಿಸುತ್ತಾರೆ. ಹುತ್ತರಿ ಹಬ್ಬವು ಅವುಗಳಲ್ಲೊಂದಾಗಿರುತ್ತದೆ. ಈ ಹಬ್ಬವನ್ನು ಕೃತಿಕಾ ಅಥವಾ ರೋಹಿಣಿ ನಕ್ಷತ್ರಗಳಲ್ಲಿ ಪೂರ್ಣಿಮೆಯ ದಿವಸ ಆಚರಿಸುತ್ತಾರೆ. ಈ ಸಮಯದಲ್ಲಿ ಆಕಾಶ ಶುಭ್ರ ನೀಲಿಯಿಂದ ಕಂಗೊಳಿಸುತ್ತದೆ. ಪೈರು ಪಚ್ಚೆಗಳು ಹಸುರು ಹಸುರಾಗಿ ಕಂಗೊಳಿಸಿ ವೀಕ್ಷಕರೆಲ್ಲರ ಮನ ಸೂರೆಗೊಳ್ಳುತ್ತದೆ. ಧಾನ್ಯಲಕ್ಷ್ಮಿಯನ್ನು ಪ್ರಪ್ರಥಮ ಬಾರಿಗೆ ಮನೆ ಮನೆಗಳಿಗೆ ಬರಮಾಡಿಕೊಳ್ಳುವುದು ಈ ಹಬ್ಬದ ದಿನದಂದೇ. ಹುತ್ತರಿ ಹಬ್ಬದ ದಿವಸ ಸ್ನಾನ ಮಾಡಿ ಮಡಿ ಉಡುಪುಗಳನ್ನು ಧರಿಸುತ್ತಾರೆ. ಮನೆ ಅಂಗಳಗಳನ್ನು ಶುಭ್ರಗೊಳಿಸುತ್ತಾರೆ. ಮನೆಯ ಬಾಗಿಲುಗಳಿಗೆ ಚೆಂಡು ಹೂವಿನ (Merry gold) ಮಾಲೆಯೊಂದಿಗೆ ತೋರಣ ಕಟ್ಟಿ ಅಲಂಕರಿಸುತ್ತಾರೆ. ಚಿಕ್ಕ ಮಕ್ಕಳು ಬಾಣ, ನಕ್ಷತ್ರ ಕಡ್ಡಿ ಪಟಾಕಿ ಮುಂತಾದವುಗಳನ್ನು ಸಿಡಿಸಿ ಸಂತೋಷ ಪಡುತ್ತಾರೆ. ಆ ದಿವಸ ಬಾಳೇ ಹಣ್ಣಿನಿಂದ ತಯಾರಿಸಿದ ತಂಬಿಟ್ಟನ್ನು ಸೇವಿಸುತ್ತಾರೆ. ರಾತ್ರಿ ಊಟಕ್ಕೆ ಹೊಸಭತ್ತದಿಂದ ತೆಗೆದ ಕೆಲವು ಅಕ್ಕಿಕಾಳನ್ನು ಸೇರಿಸಿ ಪಾಯಸ ಮಾಡುತ್ತಾರೆ. ಮನೆಗಳಲ್ಲಿ ನೆರೆಕಟ್ಟಿ ವಾದ್ಯ ಗೋಷ್ಠಿಯೊಡನೆ ಗದ್ದೆಗಳಿಗೆ ಹೋಗಿ ಕದಿರು ಕುಯ್ಯುವ ಮುನ್ನ ಪೂಜೆ ಮಾಡಿ ಕದಿರು ತೆಗೆದು ಮನೆಗಳಿಗೆ ಬಂದು ಕದಿರು ಕಟ್ಟುತ್ತಾರೆ. ನಂತರ ಸಾಮೂಹಿಕವಾಗಿ ಭೋಜನ ಮಾಡುತ್ತಾರೆ.

ಮಡಿಕೇರಿ ನಗರದ ಗೌಡ ಸಮಾಜದಲ್ಲಿ ತಾರೀಖು 24-11-1999 ರಂದು ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ವತಿಯಿಂದ ಹುತ್ತರಿ ಹಬ್ಬವನ್ನು ಬಹಳ ಸಂಭ್ರಮ ಹಾಗೂ ಸಡಗರದಿಂದ ಆಚರಿಸಲಾಯಿತು. ಅಂದು ರಾತ್ರಿ ಎಂಟು ಗಂಟೆಯ ವೇಳೆಗೆ ಗೌಡ ಸಮಾಜದ ಸಭಾಂಗಣದಲ್ಲಿ ಜನಾಂಗದವರು ಅಧಿಕ ಸಂಖ್ಯೆಯಲ್ಲಿ ಆಗಮಿಸಿ, ಆಸನಾರೂಢರಾಗಿದ್ದರು. ಸಂಗೀತದ ಧ್ವನಿ ಸುರುಳಿಯ ಮೂಲಕ ಉತ್ತಮೋತ್ತಮ ಸಂಗೀತಗಳನ್ನು ಬಿತ್ತರಿಸಲಾಯಿತು. ಸಮಸ್ತ ಜನರು ಸಂತೋಷದಿಂದ ಕದಿರು ತೆಗೆಯುವ ಸಮಯವನ್ನು ನಿರೀಕ್ಷಿಸುತ್ತಿದ್ದರು. ಹಾಗೆಯೇ ಎಂಟು ಗಂಟೆಯ ಸಮಯಕ್ಕೆ ಬಾಂಧವರು ವೇದಿಕೆಗೆ ಬಂದು ನೆರೆ ಕಟ್ಟಿದರು. ಇದಾದ ನಂತರ ವಾಲಗದೊಂದಿಗೆ ಅಕಾಡೆಮಿಯ ನಿರ್ದೇಶಕರಲ್ಲೊಬ್ಬರಾದ ಶ್ರೀ ಕರ್ಕರನ ಉತ್ತಯ್ಯನವರು ಕದಿರನ್ನು ಕುಯ್ದರು. ಬೈತಡ್ಕ ಬೆಳ್ಯಪ್ಪನವರು ಕದಿರು ತೆಗೆಯುವಾಗ ಆಕಾಶಕ್ಕೆ ಗುಂಡು ಹೊಡೆದರು. ನಂತರ ಸರಳ ಸಮಾರಂಭದಲ್ಲಿ ಕುಮಾರಿ ಪಳಂಗಾಯಿ ಜಯಶ್ರೀ ದೇವರ ಪ್ರಾರ್ಥನೆಯನ್ನು ಮಾಡಿದರು. ಶ್ರೀಮತಿ ಚೀಯಂಡಿ ರಾಧ ಯಾದವನವರು ಸಭಿಕರನ್ನು ಸ್ವಾಗತಿಸಿದರು. ನಿವೃತ್ತ ವಾಯುದಳದ ಅಧಿಕಾರಿ ಶ್ರೀ ಕೂಡಕಂಡಿ ಅಪ್ಪಾಜಿ ಮತ್ತು ಶ್ರೀ ಪರಿವಾರ ಅಪ್ಪಾಜಿ ಅವರು ಹುತ್ತರಿ ಹಬ್ಬದ ಬಗ್ಗೆ ಸೂಕ್ಷ್ಮ ಪರಿಚಯ ಮಾಡಿಕೊಟ್ಟರು. ಶ್ರೀಮಾನ್ ಮೂಟೇರ ಚಂಗಪ್ಪನವರು ಸಭಿಕರಿಗೆ ವಂದನಾರ್ಪಣೆಯನ್ನು ಮಾಡಿದರು. ಈ ಕೂಟದಲ್ಲಿ ನೆರೆದವರಿಗೆ ತಂಬಿಟ್ಟು, ವಡೆ, ಕಾಫಿ, ಅವಲಕ್ಕಿ ತಿಂಡಿಗಳನ್ನು ಪ್ರಸಾದವಾಗಿ ವಿತರಿಸಿದರು. ನಂತರ ನೆರೆದಿದ್ದವರಿಗೆಲ್ಲರಿಗೂ ಕದಿರನ್ನು ಹಂಚಿದರು. ಸುಮಾರು 9-30 ಗಂಟೆಗೆ ಎಲ್ಲರೂ ನಿರ್ಗಮಿಸಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಇತರ ಜನಾಂಗದವರು ಸಹ ಕದಿರನ್ನು ಸಂತೋಷದಿಂದ ತೆಗೆದುಕೊಂಡು ಹೋದರು.

ಕನ್ನಡ ನಾಡಿನ ವೀರ ಭೂಮಿಯಾದ ಕೊಡಗಿನಲ್ಲಿ ಗೌಡ ಜನಾಂಗದವರು ಈ ಪವಿತ್ರ ಹಬ್ಬವನ್ನು ಸದ್ಭಾವನೆಯಿಂದ ಆಚರಿಸಿ ಭೂದೇವಿಗೆ ನಮಸ್ಕರಿಸಿ ಎಲ್ಲರಿಗೂ ಶುಭವಾಗಲಿ, ಎಲ್ಲರೂ ಸಹೋದರ ಸಹೋದರಿಯರಂತೆ ಬಾಳಲಿ ಎಂದು ಹಾರೈಸುತ್ತಾ ನಾಡು ನುಡಿಗೆ ಜನ್ಮವಿತ್ತು ಸಲಹಿದ ಭೂತಾಯಿಗೆ ನಮನ ಸಲ್ಲಿಸೋಣಾ.

ಚೀಯಂಡಿ ಯಾದವ, ಮಡಿಕೇರಿ



# ಸುಕ್ರಿ ಬೊಮ್ಮಗೌಡರಿಗೆ ಆತ್ಮೀಯ ಸನ್ಮಾನ

ಸುಕ್ರಿ ಬೊಮ್ಮಗೌಡ

'ಹಾಲಕ್ಕಿ ಜನಾಂಗದ ಕೋಗಿಲೆ' ಸುಕ್ರಿ ಬೊಮ್ಮಗೌಡ ಅವರಿಗೆ ಜಾನಪದ ಕ್ಷೇತ್ರದ ಅತ್ಯಂತ ಪ್ರತಿಷ್ಠಿತ ಪ್ರಶಸ್ತಿ 'ಜಾನಪದ ಶ್ರೀ'ಯನ್ನು ನೀಡಿ ಸನ್ಮಾನಿಸಲಾಯಿತು.

ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ ಉತ್ತರ ಕನ್ನಡದ ಕರಾವಳಿಯ ವಾತಾವರಣವನ್ನು ನೆನಪಿಗೆ ತರುತ್ತಿದ್ದ ವೇದಿಕೆಯ ಮೇಲೆ ಹಾಲಕ್ಕಿ ಜನಾಂಗದ ಪರಂಪರಾಗತ ಶೈಲಿಯ ಉಡುಪಿನಲ್ಲಿದ್ದ ಅಂಕೋಲಾದ ಸುಕ್ರಿ ಅವರನ್ನು ಗೌರವಿಸಲಾಯಿತು.

ಕನ್ನಡ ಮತ್ತು ಸಂಸ್ಕೃತಿ ಖಾತೆ ಸಚಿವೆ ರಾಣಿ ಸತೀಶ್ ಹಾಗೂ ಕೈಗಾರಿಕಾ ಸಚಿವ ಆರ್. ವಿ. ದೇಶಪಾಂಡೆ ಅವರು ಸುಕ್ರಿ ಅವರಿಗೆ ಒಂದು ಲಕ್ಷ ರೂಪಾಯಿ ಚೆಕ್ ಹಾಗೂ ಜಾನಪದ ಕಲೆಯನ್ನು ಬಿಂಬಿಸುವ ವಿಶಿಷ್ಟ ಅಭಿನಂದನಾ ಫಲಕವನ್ನು ನೀಡಿ ಸನ್ಮಾನಿಸಿದರು.

ಉತ್ತರ ಕನ್ನಡ ಜಿಲ್ಲೆ ಪ್ರಕೃತಿಗೆ ಹೆಸರಾದ ತಾಣದ ನಾಡು. ಕಡಲು ಮತ್ತು ಪರ್ವತಗಳ ನಿರಂತರ ಚುಂಬನ ಇಲ್ಲಿ ನಡೆಯುತ್ತದೆ. ಗುಡುಗುಡುಸಿ ಹರಿದು ಬರುವ ನದಿಗಳು ಕ್ರಮೇಣ ಪ್ರಶಾಂತವಾಗಿ ವಿಶಾಲವಾಗಿ ಬೆಟ್ಟ ಪಂಕ್ತಿಗಳನ್ನು ತಬ್ಬಿಕೊಳ್ಳುತ್ತಾ ಸಮುದ್ರದಲ್ಲಿ ಲೀನವಾಗುವ ರೀತಿಯಂತೂ ಅಸದೃಶ. ಅಂಕೋಲಾದಿಂದ ನಾಲ್ಕೈದು ಕಿ. ಮೀ. ಪಶ್ಚಿಮಕ್ಕೆ ಮೊರೆವ ಸಾಗರದಿಂದ ಕೆಲವೇ ಅಡಿಗಳ ಈಚೆ ಇರುವ ಒಂದು ಸುಂದರ ತಾಣ ಬಡಗೇರಿ. ಉತ್ತರ ಕನ್ನಡದ ಹಾಲಕ್ಕಿ ಒಕ್ಕಲಿಗರ ಅನೇಕ ಕೊಪ್ಪಗಳಲ್ಲಿ ಬಡಗೇರಿಯೂ ಒಂದು. ಬಡಗೇರಿಯ ಪುಟ್ಟ ರಸ್ತೆಯಲ್ಲಿನ ಇಕ್ಕೆಲಗಳಲ್ಲಿ ತೆಂಗಿನ ತೋಟಗಳ ನಡುವೆ ಗೊಪ್ಪೆ ಗೊಪ್ಪೆಯಾಗಿ ಕಟ್ಟಿಕೊಂಡ ನೂರಾರು ಗುಡಿಸಲುಗಳು, ಗುಡಿಸಲ ಮುಂದೆ ಕನ್ನಡಿಯಂತೆ ಹೊಳೆವ ಸಾರಿಸಿ ಅಂದಗೊಳಿಸಿದ ಅಂಗಳ. ಅಂಗಳ ಮತ್ತು ಗುಡಿಸಲ ಗೋಡೆಯ ತುಂಬ ರಂಗೋಲಿ ಚಿತ್ತಾರ. ಹಾಲಕ್ಕಿ ಹೆಣ್ಣು ಮಕ್ಕಳು ಪ್ರಕೃತಿಯ ಒಡಲಿನ ಸೌಂದರ್ಯವತಿಯರು. ಮುಗ್ಧತೆಯೇ ಮೈವೆತ್ತ ಎಣ್ಣೆಗೆಂಪಿನ ಮಂದಹಾಸದ ತುಟಿಗಳು. ಕುಪ್ಪಸವಿಲ್ಲದ ಬತ್ತಲು ಎದೆಗೆ ಇಳಿಬಿಟ್ಟ ರಂಗುರಂಗಿನ ಹತ್ತಾರು ಮಣಿಸರಗಳ ಮಾಲೆ, ನೀಳತೋಳಿಗೆ ತೋಳಬಂದಿ. ಕಾಲಿಗೆ ಕಡಗ. ಎಲೆ ಅಡಿಕೆಯ ರಂಗಿಗೆ ಕೆಂಪಾದ ಹಲ್ಲು. ಸದಾ ಬಿಸಿಲಿಗೆ ತೆರೆದುಕೊಂಡ ಬತ್ತಲೆ ಬೆನ್ನಿನ ಕಡುಗಪ್ಪು ಬಣ್ಣ ಅವರ ಶ್ರಮದ ಸಂಕೇತ ಅವರ ದಷ್ಟಪುಷ್ಟ ಮೈಕಟ್ಟು ಮತ್ತು ಮಂದಹಾಸ ಅವರ ನಿರಂತರ ದುಡಿಮೆಯನ್ನು ಆರೋಗ್ಯಕರ ಮನಸ್ಸನ್ನು ಪ್ರತನಿಧಿಸುತ್ತದೆ. ಇಂಥ ಹಾಲಕ್ಕಿ ಹೆಂಗಸರಲ್ಲಿ ತಾನು ಒಬ್ಬಳಾಗಿ ವಾಸಿಸುತ್ತಿರುವ ಕಲಾವಿದೆ ಸುಕ್ರಿ. ಕೂತಲ್ಲಿ ನಿಂತಲ್ಲಿ ನೂರು ಹಾಡುಗಳನ್ನು ಚೆಲ್ಲಬಲ್ಲ ಮಾಟಗಾತಿ. ಸೋಬಾನೆ, ಜೋಗುಳ, ದೇವರ ಪದಗಳು, ಕಥನ ಕವನಗಳು ಮುಂತಾಗಿ ಹೇರಳ ಸಂಪತ್ತನ್ನೇ ತನ್ನದೆಯಲ್ಲಿ ತುಂಬಿ ಕೊಂಡಿರುವ ಸುಕ್ರಿ ಹಾಡಲು ಕುಳಿತಳೆಂದರೆ ಹಲವು ರಾತ್ರಿಗಳು ಹಗಲಾಗುತ್ತವೆ. ಕೇಳಲು ಕುಳಿತ ಮನಸ್ಸುಗಳು ಮುದಗೊಳ್ಳುತ್ತವೆ.

ಇಂಥ ಸಮೃದ್ಧ ಹಾಡುಗಾರ್ತಿ ಸುಕ್ರಿ ಕೇವಲ ಪದ ಹಾಡುವವಳಷ್ಟೇ ಅಲ್ಲ. ಹರಳು ಹುರಿದಂತೆ ನಿರರ್ಗಳವಾಗಿ ಮಾತನಾಡುತ್ತಾ ಎಂಥವರ ಜೊತೆಗೂ ವಾದಕ್ಕೂ ಇಳಿಯಬಲ್ಲ ಛಲಗಾತಿ. ಹಾಲಕ್ಕಿ ಒಕ್ಕಲಿಗರ ಬಡತನ. ಉತ್ತರ ಕನ್ನಡದ ಆರ್ಥಿಕ ಸಮಾಜಿಕ ಅಸಮಾನತೆ, ಪರಿಸರ ನಾಶ, ಮದ್ಯಪಾನ ಪಿಡುಗು ಮುಂತಾಗಿ ತನ್ನದೇ ಅನಿಸಿಕೆಗಳನ್ನು ನಿರ್ಭೀತಿಯಿಂದ ಬಿಚ್ಚಿಡುತ್ತಾಳೆ ಸುಕ್ರಿ. ಒಂದಕ್ಷರವನ್ನೂ ಕಲಿಯದ ಈ ನಿರಕ್ಷರ ಕುಕ್ಷಿಯ ಎದೆಯಲ್ಲಿ ಬಹುದೊಡ್ಡ ಜ್ಞಾನಜ್ಯೋತಿಯಂತೂ ಇದೆ. ಅದರ ಪ್ರಭೆ ಅಕ್ಷರ ಕಲಿತವರನ್ನು ಮಣಿಸುತ್ತದೆ. ಮಹಾಕವಿಯೊಬ್ಬನ ಸಾನಿಧ್ಯದಂತೆ ಅಲ್ಲಿ ಅವರ್ಣನೀಯ ಅನುಭವ ಉಂಟಾಗುತ್ತದೆ. ಪ್ರತಿಯೊಂದನ್ನು ಕಥೆಯ ಮೂಲಕ, ಹಾಡಿನ ಮೂಲಕ ಅಥವಾ ದೃಷ್ಟಾಂತಗಳ ಮೂಲಕವೇ ವರ್ಣಿಸಿ ಹೇಳುವ ಸುಕ್ರಿ ಹುಟ್ಟು ಕಲಾವಿದೆ ಎಂಬುದಂತೂ ನಿರ್ವಿವಾದ.

ಸುಮಾರು 65 ವರ್ಷಗಳನ್ನು ಕಳೆದಿರುವ ಸುಕ್ರಿಯ ಜೀವನ ಕೂಡ ಒಂದು ಕಾದಂಬರಿಗೆ ವಸ್ತುವಾಗುವಂಥದ್ದು. ತನ್ನ ಹನ್ನೆರಡನೇ ವರ್ಷಕ್ಕೆ ಮದುವೆಯಾದ ಸುಕ್ರಿಯನ್ನು ಗಂಡನ ಮನೆಗೆ ಹೆಗಲ ಮೇಲೆ ಕೂರಿಸಿಕೊಂಡು ಹೊತ್ತು ತರುತ್ತಾರೆ. ಮದುವೆಯಾದ ಬೊಮ್ಮಗೌಡನಿಗೆ ಆಗ 48 ವರ್ಷಗಳಂತೆ! ಹೆಣ್ಣುಗಳು ಸಿಗುವುದೇ ಅಪರೂಪವಾಗಿದ್ದ ಆ ಕಾಲದಲ್ಲಿ ಬೊಮ್ಮಗೌಡ ಕಾದು ಕಾದು 12 ವರ್ಷದ ಬಾಲೆ ಸುಕ್ರಿಯನ್ನು ವರಿಸಿದ್ದ! "ಅಮ್ಮನೋರು ಮೈನೆರೆದಾಗ ಅಯ್ಯನೋರು ದಂಡಿಗೆ ಏರುದ್ರು" ಎಂದೂ "ಮುದುಕನ ಹೆಂಡತಿ" ಎಂದು ಜನ ಕೀಟಲೆ ಮಾಡಿದ್ದುಂಟು. ಕೂಲಿಯೇ ಜೀವನ. ಕಟ್ಟಿಕೊಂಡವನೇ ದೈವ ಎಂದು ಸುಕ್ರಿ ಬಾಳಿದಳು. ಗಂಡ ತೀರಿಕೊಂಡಾಗ ಸುಕ್ರಿಗೆ ಇನ್ನೂ ಹರೆಯ. ಅಂಕೋಲಾ ತಾಲ್ಲೂಕಿನ ಅಂಬಾರಕೊಡ್ಲಿನ ಶಿರ್ಕುಲಿಯಲ್ಲಿ ಜನ್ಮ ತಾಳಿದ ಸುಕ್ರಿ ತಾನು ಹುಟ್ಟಿದಾಗಿನಿಂದಲೂ ಕೂಲಿ ಮಾಡಿ ಬದುಕಿದವಳೇ. 'ಅವರೆಲ್ಲ ಎರಡು ಸಿದ್ದೆ ಅಕ್ಕಿ ತಂದರೆ ನಾನು ಒಂದು ಸಿದ್ದೆಯನ್ನಾದ್ರೂ ತರುತ್ತಿದ್ದೆ' ಎನ್ನುವ ಸುಕ್ರಿಗೆ ಮಹಾ ಸ್ವಾಭಿಮಾನ. ಅಷ್ಟೆಲ್ಲ ಕಷ್ಟದಲ್ಲಿ ಬೆಳೆದುಬಂದ ಅನುಭವ

ಇದ್ದುದರಿಂದಲೇ ವಿಧವೆಯಾಗಿಯೂ ಸ್ವಾಭಿಮಾನಿ ಬದುಕನ್ನೇ ಸುಕ್ರಿ ನೀಸಿದ್ದಾಳೆ. ಇವತ್ತಿಗೂ ಕೂಲಿಯೇ ಜೀವನಾಧಾರ. ಹಾಲಕ್ಕಿ ಸಮಾಜದಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿದೆ. ಹಾಗೆ ಆಗಬಹುದಿತ್ತಲ್ಲಾ ಎಂಬ ಪ್ರಶ್ನೆ ಹಾಕಿದ್ದೇ ತಡ ಸುಕ್ರಿ ಒಂದು ಹಾಡಿನ ಮೂಲಕ ಕಥೆ ಹೇಳಲು ಆರಂಭಿಸಿದಳು. ಅದು ಒಂದು ನವಿಲಿನ ಕಥೆ. ಗಂಡು ನವಿಲಿಗೆ ಬಾಣ ಬಿದ್ದು ಸಾಯುತ್ತದೆ. ಬಾಣ ಬಿಟ್ಟ ಬೇಟೆಗಾರ ಇನ್ನೊಂದು ಗಂಡನ ತರಿಸಿಕೊಡುವೆ ಎನ್ನುತ್ತಾನೆ. ಇದ್ದ ಪತಿಯೇ ಹೋದ ಮ್ಯಾಲೆ ಮತ್ತೊಂದು ಗಂಡನ ಗೊಡವೆ ಯಾಕೆ? ಬೇಡ ಎಂದು ಹೆಣ್ಣು ನವಿಲು ತಿರಸ್ಕರಿಸುತ್ತದೆ. ಪಕ್ಷಿಯೇ ಹಾಗೆ ಮಾಡಿದಾಗ ನರಮನುಷ್ಯೆಯಾದ ನಾನು ಯಾಕೆ ಹಾಗೆ ಮಾಡಬಾರದು? ಇದು ಸುಕ್ರಿಯ ಅಂತರಾಳದ ನೈತಿಕ ನಂಬಿಕೆ.

ಸುಕ್ರಿ ಇಷ್ಟೆಲ್ಲ ಕತೆ ಕಾವ್ಯಗಳನ್ನು ಹೇಗೆ ಕಲಿತಳು? ಹಾಗೆ ನೋಡಿದರೆ ಇಡೀ ಹಾಲಕ್ಕಿ ಸಮಾಜವೇ ಸಾಂಸ್ಕೃತಿಕವಾಗಿ ಅತ್ಯಂತ ಶ್ರೀಮಂತವಾದದ್ದು. ಶಿವ ಮತ್ತು ಪಾರ್ವತಿಯರು ಕೊಟ್ಟ ಹಾಲು ಅಕ್ಕಿಯಿಂದಲೂ ಬಲೀಂದ್ರ ದೇವ ನೀಡಿದ ಭೂಮಿ ಮತ್ತು ಬೆಳೆಯಿಂದಲೂ ನಾವು ಬದುಕಿದ್ದೇವೆ ಎಂದು ನಂಬುವ ಈ ಜನರ ಇಡೀ ಬದುಕು ಬಣ್ಣ ಬಣ್ಣದ್ದು. ಸುಗ್ಗಿ ಹಬ್ಬ, ತೊಳಸಿ ಹಬ್ಬ, ಹೊಸತಿನ ಹಬ್ಬ, ಬೂರೆ ಹಬ್ಬ, ಗದ್ದೆ ಗಂಡನ ಹಬ್ಬ, ಬಲೀಂದ್ರನ ಹಬ್ಬ ಮುಂತಾಗಿ ತಮ್ಮದೇ ವೈಶಿಷ್ಟ್ಯದ ಹಬ್ಬಾಚರಣೆಗಳನ್ನು ಮಾಡುವ ಇವರಲ್ಲಿ ಅಳೆದಷ್ಟೂ ಹಾಡುಗಳ ಬಳ್ಳ. ಮೊಗೆದಷ್ಟೂ ಕಥೆಗಳ ಸಾಗರ. ಗುಮಟೆಯ ಸದ್ದಿಗೆ ತಕ್ಕಂತೆ ಕುಣಿಯುತ್ತಾ ಹಾಡುವ ಗಂಡಸರ ಲೆಕ್ಕವಿಲ್ಲದಷ್ಟು ಸುಗ್ಗಿ ಹಾಡುಗಳಿಗೆ ಸರಿಸಮನಾಗಿ ಹೆಂಗಸರ ಹಾಡುಗಳೂ ಇವೆ. ತಮ್ಮದೇ ನ್ಯಾಯಪದ್ಧತಿ. **ತಮ್ಮದೇ ವೈವಾಹಿಕ ಪದ್ಧತಿ ಹಾಗೂ ತಮ್ಮದೇ ಆದ ಹಲವು ಪರಂಪರಾಗತ ಜ್ಞಾನ ಪದ್ಧತಿಗಳನ್ನು ಈಗಲೂ ಉಳಿಸಿಕೊಂಡು ಬಂದಿದ್ದಾರೆ ಹಾಲಕ್ಕಿಗಳು.** ಇಂಥ ಹಾಲಕ್ಕಿಗಳ ಸುಂದರ ಸಮಾಜದಲ್ಲಿ ಅರಳಿದ ಕಾಡಿನ ಕುಸುಮ ನಮ್ಮ ಸುಕ್ರಿ. ತನ್ನ ತಾಯಿ ದೇವಿ ಮತ್ತು ಅಜ್ಜಿಯಿಂದ ಆರಂಭದಲ್ಲಿ ಕಲಿತು ನಂತರ ತನ್ನ ಪರಿಸರದಿಂದ ಹಾಡು ಕಲಿತ ಸುಕ್ರಿ. ತನ್ನ ಪ್ರತಿಭಾಶಕ್ತಿಯನ್ನು ಅದಕ್ಕೆ ಬೆರೆಸಿ ಹೊಸ ಹೊಸ ಜನಪದ ಹಾಡುಗಳ ಉದಯಕ್ಕೆ ಕಾರಣಳಾದವಳು. ತನ್ನ ಮುಂದೆ ನಿಂತ ಯಾರನ್ನು ಕುರಿತು ಬೇಕಾದರೂ ತಟ್ಟನೆ ಹಾಡುಕಟ್ಟಿ ಹಾಡಬಲ್ಲ ಜಾಣ್ಮೆಯುಳ್ಳ ಸುಕ್ರಿ ಪರಂಪರೆಯನ್ನು ಕೂಡ ಬಿಟ್ಟವಳಲ್ಲ. ಮೂಲ ಧಾಟಿ. ಬನಿ ಹಾಗೂ ಧನಿಗಳನ್ನು ಕಾಪಾಡಿಕೊಂಡು ಬಂದದ್ದಲ್ಲದೆ ತನ್ನ ಸುತ್ತಲ ಬಳಗಕ್ಕೂ ಅದನ್ನು ಕಲಿಸುವ ಹಠ ಮತ್ತು ಔದಾರ್ಯ ಅವಳದು. ಮಾದೇವರಾಯ. ಚಂದಸರಾಯ ರಾಮ ಲಕ್ಷ್ಮಣ. ಐರಾವತ, ಕುಂತಿಕಥೆ, ಸಿರಿಕವ್ವಲಿ ಮುಂತಾದ ಕಾವ್ಯಗಳನ್ನು ಹಾಡುವ ಸುಕ್ರಿ ಬಲೀಂದ್ರರಾಯ, ಗೋವಿಂದರಾಯ, ತಂಗಿ ತುಳಸಮ್ಮ ಹಾಗೂ ಕರಿದೇವರು(ಕರಿಕೆಂಚರಾಯ) ಬಗೆಗಿನ ಕಥನ ಕವನಗಳನ್ನು ಹಾಡುತ್ತಾಳೆ. ಕಳೆ, ನಾಟಿ ಮದುವೆ, ಸೋಬಾನೆ, ಸುಗ್ಗಿ ಮುಂತಾದ ಬಿಡಿ ಹಾಡುಗಳಂತೂ ಲೆಕ್ಕವಿಲ್ಲ.

ಆಧುನಿಕ ವ್ಯವಸ್ಥೆ ಹಾಗೂ ಕಲುಷಿತಗೊಂಡ ಮನಸ್ಸುಗಳ ಬಗ್ಗೆ ಸುಕ್ರಿಗೆ ಎಲ್ಲಿಲ್ಲದ ಕೋಪ. ತಮ್ಮ ಸಮಾಜದ ಗೌಡ ಬುಧವಂತರ ಸೀಮೆ ಹಾಗೂ ಚಪ್ಪರಕೂಟದ ನ್ಯಾಯಪದ್ಧತಿಯೇ ಸರಿಯಾದದ್ದು ಎಂದು ನಂಬಿರುವ ಸುಕ್ರಿಗೆ ಕಿತ್ತಾಡಿ ಕೋರ್ಟು ಕಚೇರಿ ಹತ್ತುವವರ ಬಗ್ಗೆ ತೀವ್ರವಾದ ಮರುಕವಿದೆ. ಮದ್ಯಪಾನದಿಂದಾಗಿ ಇಡೀ ಸಮಾಜಕ್ಕೆ ಸಮಾಜವೇ ನಾಶವಾಗುತ್ತಿದೆ ಎಂದು ಮರುಗುವ ಸುಕ್ರಿ ಮದ್ಯಪಾನ ವಿರುದ್ಧದ ಚಳುವಳಿಯಲ್ಲಿ ಮುಂಚೂಣಿ ನಾಯಕತ್ವ ವಹಿಸಿದ್ದಾಳೆ. ದಿ. ಕುಸುಮಾ ಸೊರಬ ಅವರ ಮಾರ್ಗದರ್ಶನದಲ್ಲಿ ಸಾವಿರಾರು ಹಾಲಕ್ಕಿ ಮಹಿಳೆಯರನ್ನು ಒಟ್ಟುಗೂಡಿಸಿ ಅಂಕೋಲಾ, ಕಾರವಾರ, ಶಿರ್ಶಿ ಹಾಗೂ ಬೆಳಗಾವಿ ಜಿಲ್ಲಾಧಿಕಾರಿ ಕಚೇರಿಗಳ ಮುಂದೆ ಧರಣಿ ನಡೆಸಿದ್ದಾಳೆ. ತನ್ನ ಪ್ರಯತ್ನದಿಂದಾಗಿಯೇ ಬಡಗೇರಿ ಕೊಪ್ಪದಲ್ಲಿ ಇಂದು ಯಾವ ಗಂಡಿಗೂ ಮದ್ಯಪಾನ ಮಾಡುವ ಧೈರ್ಯ ಇಲ್ಲ ಎಂದು ಸುಕ್ರಿ ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ.

ಬಡಗೇರಿಯ ಹಾಲಕ್ಕಿ ಹೆಣ್ಣು ಮಕ್ಕಳನ್ನು ಒಂದುಗೂಡಿಸಿ ಅವರಿಗೆ ಪ್ರಾಚೀನ ಕುಣಿತಗಳೆನಿಸಿದ 'ತಾರ್ಲೆ, ಪಗಡೆ, ಬಿದರಂಡೆ' ಮುಂತಾದ ಕಲೆಗಳನ್ನು ಕಲಿಸುತ್ತಿರುವ ಸುಕ್ರಿಗೆ ಅವುಗಳನ್ನು ಉಳಿಸುವ ಅಪಾರ ಆತ್ಮವಿಶ್ವಾಸವಿದೆ. ತನಗೆ ಬಂದ ಜಾನಪದಶ್ರೀ ಪ್ರಶಸ್ತಿ ಇಡೀ ನಮ್ಮ ಹಾಲಕ್ಕಿ ಸಮಾಜಕ್ಕೆ ಬಂದದ್ದು ಎಂದು ವಿನಯದಿಂದ ಹೇಳುತ್ತಾಳೆ. ಇಂಥ ಮಹಾನ್ ವ್ಯಕ್ತಿತ್ವದ ಬದುಕಟ್ಟು, ಕಲಾವಿದೆಯನ್ನು ಗುರುತಿಸಿ ಜಾನಪದಶ್ರೀ ಪ್ರಶಸ್ತಿ ನೀಡುವ ಮೂಲಕ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಸರ್ಕಾರ ತನ್ನನ್ನು ಗೌರವಿಸಿಕೊಂಡಿದೆ.

**ಪ್ರೊ. ಡಿ. ಚಿ. ಬೋರಲಿಂಗಯ್ಯ, ಕೃಪೆ : ಪ್ರಜಾವಾಣಿ.**

ವಿ. ಸೂ. : ಹಾಲು ಪೊಕ್ಕಲು ಮಕ್ಕಳ ಸಂಸ್ಕೃತಿ ಸಂಪ್ರದಾಯಗಳು ಅರೆಭಾಷೆ ಗೌಡರ ಕಟ್ಟು, ಕಟ್ಟಲೆ ಸಾಂಸ್ಕೃತಿಕ ಸಂಪ್ರದಾಯಗಳು ಸೋಬಾನೆ ಇತ್ಯಾದಿಗಳು ಅತೀ ಸಮೀಪದಲ್ಲಿರುತ್ತದೆ. ಯುವ ಪೀಳಿಗೆ ಈ ನಿಟ್ಟಿನಲ್ಲಿ ಸಂಶೋಧನೆ ಮಾಡಿದಾಗ ಅರೆಭಾಷೆ ಗೌಡರ ಜನಾಂಗದ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಾಗಲಿದೆ ಅನ್ನುವ ವಿಷಯವನ್ನು ಈ ಮೂಲಕ ತಿಳಿಸಲು ಸಂಗಾತಿ ಸಂತಸ ಪಡುತ್ತದೆ.

**– ಸಂಪಾದಕಿ**

---

## ಸಂಪ್ರದಾಯ

ನಮ್ಮ ನಾಡು, ಕಾವೇರಿ ಬೀಡು
ಗೌಡ ಜನರ ನೆಲೆವೀಡು
ಬೇಸಾಯವೇ ನಮ್ಮ ಪಾಡು
ಆಚರಿಸುವೆವು ನಾವು ಕೈಲು ಪೋಳ್ದು
ಮಾಡುವೆವು ನಾವು ಹುತ್ತರಿ, ಕೋಲು
ಹಾಡುವೆವು ನಾವು ಹುತ್ತರಿ ಹಾಡು
ಹೋಗುವೆವು ನಾವು ಮದುವೆ ದಿಬ್ಬಣ
ಹಾಡುವೆವು ನಾವು ಸೋಬಾನಾ
ಹೇಳಬೇಡಿ ನೀವು ಇದಕ್ಕೆ ವಿದಾಯ
ಇದುವೇ ನಮ್ಮ ನಿಮ್ಮಯ ಸಂಪ್ರದಾಯ.

**ಎಡಿಕೇರಿ ಜಿ. ಜಗನ್ನಾಥ್, ಬಲ್ಲಮಾವಟಿ**

# ಫೀಲ್ಡ್ ಮಾರ್ಷಲ್ ಕೊಡೆಂದೇರ ಎಂ. ಕಾರ್ಯಪ್ಪ
## 28-1-1899 - 15-5-1993



ಕೆ. ಎಂ. ಕಾರ್ಯಪ್ಪ

ಈ ವರುಷ ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರ ಜನ್ಮ ಶತಾಬ್ದಿಯನ್ನು ದೇಶದಾದ್ಯಂತ ಆಚರಿಸುತ್ತಿದ್ದೇವೆ. ದಿವಗಂತ ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರ ವ್ಯಕ್ತಿತ್ವದ ಬಗ್ಗೆ ಸಾಕಷ್ಟು ಲೇಖನಗಳು ಪ್ರಕಟವಾಗಿದೆ. ಅವರಂತಹ ಧೀರ, ಶಿಸ್ತು, ಸಹನ ಶೀಲತೆ ಮತ್ತು ಉದಾರ ಮನಸ್ಸಿನ ಇನ್ನೊಬ್ಬ ವ್ಯಕ್ತಿಯನ್ನು ನಾವು ಕಾಣುವುದು ತುಂಬಾ ವಿರಳ. ಅವರಿಗೆ ಎಷ್ಟು ಸಹನಶೀಲತೆ ಇತ್ತು ಎಂಬುದಕ್ಕೆ ಒಂದು ಘಟನೆಯನ್ನು ಕೊಡಗು ಸಂಗಾತಿ ಓದುಗರಿಗೆ ತಿಳಿಸಲು ಇಚ್ಛಿಸುತ್ತೇನೆ.

ಇದು ನಡೆದದ್ದು ತಾರೀಖು 26-1-1963ರಲ್ಲಿ. ಆ ಸಮಯದಲ್ಲಿ ನಾನು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿ ವ್ಯಾಸಂಗ ಮಾಡುತ್ತಿದ್ದೆ. ನಾನು ಗಣತಂತ್ರ ದಿನಾಚರಣೆಯ ಪರೇಡಿನ ಎನ್.ಸಿ.ಸಿ. ತುಕಡಿಯಲ್ಲಿ ಒಬ್ಬ ಸದಸ್ಯನಾಗಿದ್ದೆ. ಆ ಸಮಯದಲ್ಲಿ ಹಿಂದಿಯ ವಿರುದ್ಧ ಹಿಂದಿ ಬೇಡವೆಂದು ದೊಡ್ಡ ಚಳುವಳಿ ಶುರುವಾಗಿತ್ತು. ನಮ್ಮ ಎನ್. ಸಿ. ಸಿ. ತುಕಡಿಯ ಮುಖಂಡರು ಆಗಿನ ಕೂರ್ಗ್ ಎನ್. ಸಿ. ಸಿ. ಬೆಟಾಲಿಯನ್‌ನ ಕಮಾಂಡೆಂಟ್ ಮೇಜರ್ ಮುದ್ದಪ್ಪನವರಿಗೆ ಹಿಂದಿಯಲ್ಲಿ ಪರೇಡಿಗೆ ಆದೇಶ (Word of Command) ನೀಡಬಾರದೆಂದು ಮನವಿ ಮಾಡಿದ್ದರು. ಆದರೆ ಕಾನೂನಿನ ಪ್ರಕಾರ ಪರೇಡಿಗೆ ಹಿಂದಿಯಲ್ಲಿಯೆ ಆದೇಶ ನೀಡಬೇಕಾಗಿದ್ದರಿಂದ ನಮ್ಮ ಮನವಿಯನ್ನು ತಳ್ಳಿಹಾಕಿದರು. ಇದರಿಂದ ಅಸಮಾಧಾನಗೊಂಡ ನಾವು (ಕಾನೂನನ್ನು ಅರ್ಥ ಮಾಡಿಕೊಳ್ಳದೆ) ಹಿಂದಿಯಲ್ಲಿ ಆದೇಶ ನೀಡಿದಲ್ಲಿ ನಾವು ಅದರ ಪಾಲನೆ ಮಾಡಬಾರದೆಂದು ನಿಶ್ಚಯಿಸಲಾಯಿತು.

ತಾರೀಖು 26-1-1963ರ ಗಣತಂತ್ರ ದಿನಾಚರಣೆಯ ಪರೇಡಿಗೆ ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರನ್ನು ಮುಖ್ಯ ಅತಿಥಿಯಾಗಿ ಬರಮಾಡಿದ್ದರು. ಅವರು ವೇದಿಕೆ ಮೇಲೆ ಬಂದಾಗ ಪರೇಡಿನ ಕಮಾಂಡೆಂಟ್ ಮೇಜರ್ ಮುದ್ದಪ್ಪನವರು ಹಿಂದಿಯಲ್ಲಿ "ಪರೇಡ್ ಜನರಲ್ ಸಲ್ಯೂಟ್ ದೇಗಾ- ಜನರಲ್ ಸೆಲ್ಯೂಟ್" ಎಂದರು. ಆದರೆ ಯಾರೂ ಸೆಲ್ಯೂಟ್ ಹೊಡೆಯಲಿಲ್ಲ. ಈ ಘಟನೆಯಿಂದ ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರ ಮನಸ್ಸಿಗೆ ತುಂಬಾ ನೋವಾಯಿತು. ಅವರು ನಮ್ಮನ್ನು ಉದ್ದೇಶಿಸಿ "ನೀವು ಈ ದಿನ ಆರ್ಮಿಯಲ್ಲಿ ಇದ್ದಿದ್ದರೆ ಆರ್ಮಿ ಆಕ್ಟ್‌ನ ಪ್ರಕಾರ ಕೋರ್ಟ್ ಮಾರ್ಷಲ್‌ಗೆ (Court Marshial) ಒಳಗಾಗುತ್ತಿದ್ದೀರಿ ಎಂದರು. ಅವರು ಒಂದಿಷ್ಟು ಕೋಪಗೊಳ್ಳದೆ "ನೀವು ಈ ರೀತಿ ಮಾಡಬಾರದಿತ್ತು" ಎಂದು ಹಿತವಚನ ನುಡಿದು ಸರ್‍ರನೆ ವೇದಿಕೆಯಿಂದ ಇಳಿದು ಕಾರಿನಲ್ಲಿ ಹೊರಟು ಹೋದರು. ಆಗ ನಮಗೆ ಹುಡುಗಾಟ, ತಿಳುವಳಿಕೆ ಇರಲಿಲ್ಲ. ಆಮೇಲೆ ಅವರಿಗೆ ಮಾಡಿದ ಅವಮಾನಕ್ಕಾಗಿ ತುಂಬಾ ಪಶ್ಚತಾಪ ಪಟ್ಟೆವು.

ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರ ಅಂತಿಮ ದಿನಗಳು ಬೆಂಗಳೂರಿನ ಕಮಾಂಡ್ ಹಾಸ್ಪಿಟಲ್‌ನಲ್ಲಿಯೆ ಕಳೆಯಿತು. ಅವರು ಅಸ್ವಸ್ಥರಾಗಿದ್ದಾಗ ಬೆಂಗಳೂರಿನ ಎ. ಎಸ್. ಸಿ. ಸೆಂಟರ್‌ನ ಆಫೀಸರ್ ಮೆಸ್‌ನಲ್ಲಿ ಅವರಿಗಾಗಿ ಪ್ರತ್ಯೇಕ ಕೋಣೆಯೊಂದನ್ನು ಕೊಟ್ಟಿದ್ದರು. ಆ ಸಮಯದಲ್ಲಿ ನಾನು ಎ. ಎಸ್. ಸಿ. ಸೆಂಟರ್‌ನಲ್ಲಿ ಕಾರ್ಯನಿರತನಾಗಿದ್ದೆ. ಆದ್ದರಿಂದ ಅವರನ್ನು ನೋಡುವ ಸೌಭಾಗ್ಯ ಒದಗಿ ಬಂತು. ಅವರು 15-5-1993ರಲ್ಲಿ ಶಿವಾಧೀನರಾದಾಗ ಅವರ ಪಾರ್ಥಿವ ಶರೀರವನ್ನು ಮಡಿಕೇರಿಯ "ರೋಷನಾರ"ಕ್ಕೆ ಕೊಂಡೊಯ್ಯುವ ಮೊದಲು ಎ. ಎಸ್. ಸಿ. ಸೆಂಟರ್‌ನ 'ಆಡಿಟೋರಿಯಂ'ನಲ್ಲಿ ಸಾರ್ವಜನಿಕರ ಅಂತಿಮ ದರ್ಶನಕ್ಕಾಗಿ ಎರಡು ದಿವಸ ಇಟ್ಟಿದ್ದರು. ಆರ್ಮಿಯ ಕಾನೂನಿನ ಪ್ರಕಾರ ಜನರಲ್ ಆಫೀಸರ್‌ನ ಪಾರ್ಥಿವ ಶರೀರವನ್ನು ಕಾಯಲು ಒಬ್ಬ ಆಫೀಸರ್ ಮತ್ತು ಎರಡು ಜೆ. ಸಿ. ಓ. (ಜ್ಯೂನಿಯರ್ ಕಮಿಷನ್ಡ್ ಆಫೀಸರ್) ಒಂದು ಪಾಳಿಗೆ (Shift) ಪಹರೆಗಾಗಿ ನೇಮಿಸುತ್ತಾರೆ. ಆ ಸಮಯದಲ್ಲಿ ನಾನು ಮತ್ತು ಇನ್ನೊಬ್ಬ ಕೊಡಗಿನ ಜೆ. ಸಿ. ಓ. ಮಾತ್ರ ಎ. ಎಸ್. ಸಿ. ಸೆಂಟರ್‌ನಲ್ಲಿದ್ದರಿಂದ ನಾವು ಪಹರೆಗಾಗಿ ನೇಮಕಗೊಂಡರು. ಈ ರೀತಿ ತಾರೀಕು 26-1-1963ರಲ್ಲಿ ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪನವರಿಗೆ ಮಾಡಿದ ಅಪಮಾನಕ್ಕಾಗಿ ಅವರ ಪಾರ್ಥಿವ ಶರೀರಕ್ಕೆ ಪಹರೆ ನಿಂತು ಆತ್ಮ ಶುದ್ಧಿ ಮಾಡಿಕೊಂಡೆ.

ನಿವೃತ್ತ ಸುಬೇದಾರ್ ಮೇಜರ್ ಪೂಜಾರೀರ ಗೋಪಾಲ
ಬೆಂಗಳೂರು.

---

## ಶುಭ ವಿವಾಹ

ಮೈಸೂರಿನಲ್ಲಿ ವಾಸವಿರುವ ಮದೆನಾಡಿನ ನೆಕ್ಕಿಲನ ಅಣ್ಣಯ್ಯನವರ ಮಗ ಮೋಹನ ಇವರಿಗೂ ಮತ್ತು ಮಕ್ಕಂದೂರು ಗ್ರಾಮದ ಮೊಳ್ಳೇರ ಬಸಪ್ಪನವರ ಪುತ್ರಿ ಲಲಿತ ಇವಳಿಗೂ ದಿನಾಂಕ 29-11-99ನೇ ಸೋಮವಾರ ಮೈಸೂರಿನ ಜಯಲಕ್ಷ್ಮಿಪುರಂನಲ್ಲಿರುವ ಕೊಡಗು ಗೌಡ ವಿದ್ಯಾರ್ಥಿ ನಿಲಯದಲ್ಲಿ ಭಾರಿ ವಿಜೃಂಭಣೆಯಿಂದ ನಡೆಯಿತೆಂದು ತಿಳಿದು ಬಂದಿದೆ.

# ಪತ್ರ ವಿಭಾಗ :



ಮಾನ್ಯರೆ,

ಕೊಡಗು ಸಂಗಾತಿ ನವೆಂಬರ್ 16 ರಿಂದ 30ರ ಪತ್ರ ವಿಭಾಗದಲ್ಲಿ ಶ್ರೀ ಬಾಚರಣೆಯಂಡ ಅಪ್ಪಣ್ಣನವರ ಸಲಹೆ ಅಮೂಲ್ಯವಾದದ್ದು ಅಷ್ಟೇ ಕಷ್ಟಕರವಾದದ್ದು. ಆದರೆ ಕಷ್ಟವನ್ನು ಇಷ್ಟ ಪಟ್ಟು ಕೆಲವು ತರುಣ ತರುಣಿಯರು ಮುಂದೆ ಬರುವಂತೆಯೂ ಪ್ರೋತ್ಸಾಹಿಸುವುದು ಒಳಿತು.

ಗೌಡ ಸಮಾಜ ಬೆಂಗಳೂರು ಮತ್ತು ವಾರ್ಷಿಕ ಸಭೆ. ಈ ಲೇಖನವನ್ನು ಬರೆದ ಶ್ರೀಮಾನ್ ಗೋವಿಂದಮ್ಮನ ಅಚ್ಚಯ್ಯ ಬೆಂಗಳೂರು ಇವರಿಗೆ ನನ್ನ ಅನಂತ ನಮನಗಳು. ಇಂತಾ ಚಿಂತಕರು ಹೆಚ್ಚಬೇಕು. ಗೌಡ ಸಮಾಜದ ವಾರ್ಷಿಕ ಮೀಟಿಂಗ್‌ಗೆ ಕೊಡವ ಸಮಾಜದ ಅಧ್ಯಕ್ಷ ಮಲ್ಲೇಂಗಡ ಬೆಳ್ಯಪ್ಪನವರನ್ನು ಆಹ್ವಾನಿಸಿದ್ದು ಗೌಡ ಕೊಡವ ಜನಾಂಗದ ಒಂದುಗೂಡುವಿಕೆಗೆ ನಾಂದಿ ಆದೀತು. ಕೊಡಗಿನಲ್ಲಿ ಪ್ರಜಾವೇದಿಕೆಯಲ್ಲಿ ಮಾಡಿದ ಕೆಲವು ಹೊರನಾಡಿನ ಬಾಡಿಗೆ ಭಾಷಣಕಾರರು ಕೊಡಗಿನಲ್ಲಿದ್ದ, ಗೌಡ ಕೊಡವ ಸೌಹಾರ್ದತೆಯನ್ನು ಕೆಡಿಸಿಟ್ಟರು. ಆದರಿಂದ ನಾವು ಚೇತರಿಸಿಲ್ಲ. ಅಂತಾ ಸಂದರ್ಭದಲ್ಲಿ ಗೌಡ ಸಮಾಜ ತೆಗೆದುಕೊಂಡ ಪ್ರಥಮ ನಿಲುವಿಗೆ ನಾನು ಶರಣು. ಇಂತಾ ಸುಸಂದರ್ಭಗಳು ಎಲ್ಲೆಡೆಯೂ ಸಾಗಲಿ. ಮೊಟ್ಟ ಮೊದಲು ಹಳ್ಳಿಗಾಡಿನಿಂದ ಸಾಗಿದರೆ ಒಳಿತು. ಹಳ್ಳಿಯಲ್ಲಿ ಸಂಸ್ಕೃತಿ ಸಂಪ್ರದಾಯವಿದೆ. ಆಚರಣೆ ಇದೆ. ಪಟ್ಟಣದ ವಿಷಯ ಬೇರೆ ಒಟ್ಟಿನಲ್ಲಿ ನನ್ನಲ್ಲಿದ್ದ ಬಹು ವರುಷಗಳ ಕನಸಿಗೆ ನನ್ನ ಜೀವ ಇರುವಾಗಲೇ ಚಾಲನೆ ಸಿಕ್ಕಿದ್ದು ಸಂತೋಷಕರ.

ಗೌಡ ಕೊಡವ ಜನಾಂಗವು ಕೊಡಗಿನಲ್ಲಿ ಒಟ್ಟಾಗಿ ಬಾಳಲಿ. ಒಟ್ಟಾಗಿ ಸಹಜೀವನ ನಡೆಸಲಿ. ಇದಕ್ಕೆ ವಿರೋಧಿಗಳು ತಮ್ಮನ್ನು ತಾವು ಪರಿವರ್ತಿಸಿಕೊಳ್ಳಲಿ.

ಕೊಡಗಿನವರಾದ ಗೌಡ ಕೊಡವ ಜನಾಂಗದವರು ಕೊಡಗಿನ ಮಣ್ಣು, ಕೊಡಗಿನ ನೀರು, ಕೊಡಗಿನ ಗಾಳಿಯನ್ನು ಕಲುಷಿತ ಗೊಳಿಸದಿರಲಿ. ಅದನ್ನು ಪೋಷಿಸಿ ಕಾಪಾಡಲಿ. ಗೌಡ ಕೊಡವ ಜನಾಂಗಗಳು ಒಬ್ಬರನ್ನೊಬ್ಬರು ವಿಶ್ವಾಸ ಗಳಿಸಲಿ. ಆ ವಿಶ್ವಾಸವೇ ನಮ್ಮ ಶ್ವಾಸವಾಗಿರಲಿ.

**ಚೇಂದ್ರಿಮಾಡ ಮುತ್ತಪ್ಪ**
**ಕುಶಾಲನಗರ.**

---

## ಸಂಗಾತಿ ಧ್ಯೇಯ

ಕೊಡಗು ಸಂಗಾತಿಯು ಉತ್ತಮ ಸೇವೆಯನ್ನು ನೀಡುವುದರ ಮೂಲಕ ಮತ್ತು ಸಮಾಜದ ಅಭಿವೃದ್ಧಿಗಾಗಿ ಸಂಪನ್ಮೂಲಗಳನ್ನು ಒದಗಿಸುವುದರ ಮೂಲಕ ನಮ್ಮ ಜನಾಂಗದ ಬದುಕನ್ನು ನಿಶ್ಚಿತ ರೀತಿಯಲ್ಲಿ ಹಸನಾಗಿಸುವುದು ಹಾಗೂ ಇನ್ನು ಉತ್ತಮ ಗೊಳಿಸುವುದೇ ನಮ್ಮ ಧ್ಯೇಯ.

## ಅಕ್ಟೋಬರ್ ತಿಂಗಳಲ್ಲಿ ನಡೆದ ಪದವಿ ಪೂರ್ವ ಕಾಲೇಜುಗಳ ಜಿಲ್ಲಾ ಮಟ್ಟದ ಕ್ರೀಡಾ ಕೂಟದ 3,000 ಮೀ. ಸ್ಪರ್ಧೆಯಲ್ಲಿ ಚಿನ್ನದ ಪದಕವನ್ನು ತನ್ನದಾಗಿಸಿ ಕೀರ್ತಿ ತಂದ ಪೊಕ್ಕುಳಂಡ್ರ ಚಿಂಗಪ್ಪ ಬಬಿತಾ



ಮಡಿಕೇರಿಯ ಪೋಲಿಸ್ ಗ್ರೌಂಡ್‌ನಲ್ಲಿ ದಿನಾಂಕ 11-10-1999ರಂದು ಪದವಿಪೂರ್ವ ಕಾಲೇಜುಗಳ ವಿದ್ಯಾರ್ಥಿಗಳ ಜಿಲ್ಲಾಮಟ್ಟದ ಕ್ರೀಡಾಕೂಟವು ನಡೆಯಿತು. ಈ ಕ್ರೀಡಾಕೂಟದ 3,000 ಮೀ. ವಿಭಾಗದ ಓಟದ ಸ್ಪರ್ಧೆಯಲ್ಲಿ ಜಿಂಕೆಯಂತೆ ಓಡಿ ಚಿನ್ನದ ಪದಕವನ್ನು ಗೆದ್ದು ಜನಾಂಗಕ್ಕೆ ಕೀರ್ತಿ ತಂದಿದ್ದಾಳೆ ಕು. ಪೊಕ್ಕುಳಂಡ್ರ ಚಿಂಗಪ್ಪ ಬಬಿತಾನವರು.

ಹಳ್ಳಿಯ ಮುಗ್ಧ ಬಾಲಕಿಯು ನಗರದ ಸ್ಪರ್ಧಿಗಳೊಂದಿಗೆ ಪೈಪೋಟಿ ನಡೆಸಿ ಪದಕಗಳನ್ನು ಗೆಲ್ಲುವುದು ಸಾಧಾರಣವೇನಲ್ಲ. ಇವಳು ಚೇರಂಬಾಣೆಯ ಪದವಿಪೂರ್ವ ಕಾಲೇಜಿನಲ್ಲಿ ದ್ವಿತೀಯ ವರ್ಷದಲ್ಲಿ ವ್ಯಾಸಂಗ ಮಾಡುತ್ತಿದ್ದಾಳೆ. ತಾಲ್ಲೂಕು ಮಟ್ಟದ ಕ್ರೀಡಾಕೂಟದಲ್ಲಿ ಉತ್ತಮ ಸಾಧನೆ ಮಾಡಿದ ಇವಳು ಜಿಲ್ಲಾ ಮಟ್ಟದಲ್ಲಿಯೂ ಉತ್ತಮ ಸಾಧನೆ ಮಾಡಿದ್ದಾಳೆ. ರಾಜ್ಯ ಮಟ್ಟದಲ್ಲಿಯೂ ಪ್ರಶಸ್ತಿಯನ್ನು ಗೆದ್ದು ಕೀರ್ತಿ ತರಲೆಂದು ಮನಸಾರೆ ಹಾರೈಸೋಣ. ಮಡಿಕೇರಿ ನಗರದಲ್ಲಿ ನಡೆದ ಅರೆಭಾಷೆ ಗೌಡರ ಕ್ರೀಡಾಕೂಟದ 100 ಮೀ. ಓಟದಲ್ಲಿ ಪ್ರಥಮಸ್ಥಾನ ಪಡೆದಿದ್ದಾಳೆ. ಇವಳ ತಂದೆ ಪೊಕ್ಕುಳಂಡ್ರ ಚಿಂಗಪ್ಪ ಮತ್ತು ತಾಯಿ ನೆರವಂಡ ಪಾಪಣ್ಣನವರ ತಂಗಿ. ಇವ್ರು ಸಹ ಟೀಚರ್ ಆಗಿ ಬೆಂಗಳೂರಿನಲ್ಲಿ ಸೇವೆ ಸಲ್ಲಿಸುತ್ತಿರುವವರು. ಒಬ್ಬಳು ಅಕ್ಕ ಒಬ್ಬ ತಮ್ಮ ಕೂಡ ಇದ್ದಾರೆ. ಮುಂದೆ ರಾಜ್ಯ ಮಟ್ಟದಲ್ಲಿ ಉತ್ತಮ ಸಾಧನೆಗೈದು ಕೀರ್ತಿ ತರಲೆಂಬುದಾಗಿ ಶುಭವನ್ನು ಹಾರೈಸೋಣ.

**ಮುಂಡ್ಓಡಿ ವಿಜಯ್, ಬೆಂಗಳೂರು.**

## ಶಾಸ್ತ್ರೀಯ ಸಂಗೀತ

ಇಡೀ ಬ್ರಹ್ಮಾಂಡವೇ ಸಂಗೀತಮಯವಾಗಿದೆ. ಸಕಲ ಚರಾಚರಗಳೂ ತಮ್ಮದೇ ಆದ ರೀತಿಯಲ್ಲಿ ನಾದಮಯವಾಗಿವೆ. ಈ ನಾದಗಳಿಂದಲೇ ಸಪ್ತ ಸ್ವರಗಳೂ ಗುರುತಿಸಲ್ಪಟ್ಟಿವೆ. [ಸ.ರಿ.ಗ.ಮ.ಪ.ದ.ನಿ.] ಪ್ರಕೃತಿಯಲ್ಲಿಯೇ ಅಡಗಿರುವ ಈ ಸ್ವರಗಳನ್ನು ಗುರುತಿಸಿ, ಅನುಕರಿಸಿ, ಸಾಧನೆ ಮಾಡಿ ಅದಕ್ಕೊಂದು ಸಾಕಾರ ರೂಪ ಕೊಟ್ಟು, ಬೆಳಕಿಗೆ ತಂದಿದ್ದಾರೆ. ಸಾಧಕರಾದ ನಮ್ಮ ಪೂರ್ವಿಕರು ಇದೇ ನಾಲ್ಕನೇ ವೇದವಾದ ಸಾಮವೇದವು ಕೂಡ. ಸಾಮವೇದವು ರಾವಣನ ರೋಧನವೆಂಬ ಪ್ರತೀತಿ ಇದೆ. [ಹಿಂದೆ ರಾವಣನು ತನ್ನ ತಾಯಿಯ ಶಿವಪೂಜೆಗೆಂದು ಶಿವನ ಆತ್ಮ ಲಿಂಗವನ್ನು ತರಲು ಕೈಲಾಸಕ್ಕೆ ಬಂದು ಪ್ರಾರ್ಥಿಸುತ್ತಾನೆ. ಎಷ್ಟು ಪ್ರಾರ್ಥಿಸಿದರೂ ಶಿವನು ಪ್ರತ್ಯಕ್ಷನಾಗದಿರಲು, ಶಿಖರದ ತಳಕ್ಕೆ ಕೈಹಾಕಿ ಅಲುಗಾಡಿಸಲು ಪ್ರಯತ್ನಿಸಿದಾಗ ಕೈ ಸಿಕ್ಕಿಹಾಕಿ ಕೊಳ್ಳುತ್ತದೆ. ಆಗ ರಾವಣ ರೋಧಿಸುತ್ತಾನೆ]

ಈ ಸಪ್ತ ಸ್ವರಗಳಲ್ಲಿ ರೂಪಿತವಾದ ನಾನಾ ರಾಗಗಳು ನಮ್ಮ ಶರೀರದಲ್ಲಿ, ಮನಸ್ಸಿನಲ್ಲಿ ವಿಧವಿಧವಾದ ಭಾವನೆಗಳನ್ನು ಮೂಡಿಸುತ್ತದೆ. ಕೆಲವು ರಾಗಗಳನ್ನು ಕೇಳಿದಾಗ ಮನಸ್ಸಿಗೆ ಅಮೃತ ಸಿಂಚನವಾದ ಹಾಗಾಗುತ್ತದೆ. ಕೆಲವು ರಾಗಗಳು ಕಿವಿದೆರೆಗೆ ಬಿದ್ದಾಗ ರೋಮ ರೋಮಗಳೂ ನಿಮಿರಿ ನಿಲ್ಲುತ್ತವೆ. ಇನ್ನು ಕೆಲವು ರಾಗಗಳು ನಮ್ಮ ಹೃದಯವೆಂಬ ಕೊಳವು ಉಕ್ಕೇರುವಂತೆ ಮಾಡುತ್ತವೆ. ಅಂತೆಯೇ ಮತ್ತೆ ಕೆಲವು ರಾಗಗಳು ಭಕ್ತಿರಸವು ಉಕ್ಕಿಹರಿಯುವಂತೆ ಮಾಡುತ್ತವೆ. ಹೀಗೆ ರಾಗಗಳಲ್ಲಿ ಹಲವು ಭಾವನೆಗಳು ನಮ್ಮ ಹೃದಯದಲ್ಲಿ ಮಾನಸಿಕ ಹಾಗೂ ಶಾರೀರಿಕವಾಗಿ ಸ್ಪಂದಿಸುತ್ತವೆ.

ಈ ಸಂಗೀತಕ್ಕೆ ಎಂತಹ ಗುಣವಿದೆಯೆಂದರೆ, ಹಿಂದೆಲ್ಲಾ ಹಾಡು ಹೇಳಿ ಮಳೆ ತರಿಸಿದರು, ದೀಪ ಉರಿಸಿದರು ಎಂದು ಹೇಳುವುದನ್ನು ನೀವು ಕೇಳಿರಬಹುದು. ಈಗ ಒಳ್ಳೆಯ ಸಂಗೀತ ಖಾಯಿಲೆಗಳನ್ನು ಗುಣಪಡಿಸುತ್ತದೆ ಎಂದು ಸಂಶೋಧಕರು ತೋರಿಸಿ ಕೊಟ್ಟಿದ್ದಾರೆ. ಮಾನಸಿಕ ರೋಗಿಗಳಿಗಂತೂ ಇದು ಬಹಳ ಪ್ರಯೋಜನಕಾರಿ. ಪಶು ಪಕ್ಷಿಗಳೂ ಅಷ್ಟೆ. ಹಿಂದೆ ತಮಿಳುನಾಡಿನಲ್ಲಿ ಶ್ರೇಷ್ಠ ಗಾಯಕರೊಬ್ಬರು ಹಾಡುತ್ತಿದ್ದಾಗ ಕರುವೊಂದು ಹಾಲು ಕುಡಿಯುವುದನ್ನು ಬಿಟ್ಟು ಕಿವಿ ನಿಮಿರಿಸಿ ಸುಶ್ರಾವ್ಯವಾದ ಆ ಸಂಗೀತವನ್ನು ಆಲಿಸುತ್ತಿತ್ತಂತೆ. ಇದನ್ನು ನೋಡಿದ ಆ ಸಂಗೀತಗಾರನಿಗೆ ಆಶ್ಚರ್ಯವಾಯಿತಂತೆ.

ಗಿಡ, ಮರ, ಬಳ್ಳಿಗಳಿಗೂ ಕೂಡ ಸಂಗೀತವೆಂದರೆ ಅತ್ಯಂತ ಪ್ರೀತಿ ಎಂದರೆ ನಂಬುತ್ತೀರಾ? ಇವುಗಳು ಬೆಳಕಿನೆಡೆಗೆ ಮುಖ ಮಾಡಿ ರೆಂಬೆ ಕೊಂಬೆಗಳನ್ನು ಚಾಚಿ ಬೆಳೆಯುತ್ತವೆ ಎಂದು ನೀವು ವಿಜ್ಞಾನದಲ್ಲಿ ಓದಿರಬಹುದು. ಆದರೆ ಸಂಶೋಧಕರು ಗಿಡ, ಮರ, ಬಳ್ಳಿಗಳಿಗೂ ಸಂಗೀತವೆಂದರೆ ಪ್ರಿಯವೆಂದು ಸಾಧಿಸಿ ತೋರಿಸಿಕೊಟ್ಟಿದ್ದಾರೆ. ಮನೆಯ ಸುತ್ತಲೂ ಬೆಳೆದ ಸಸ್ಯಗಳು ಮನೆಯೊಳಗಿನಿಂದ ಕೇಳಿಬರುವ ಸಂಗೀತವನ್ನು ಆಲಿಸಲು ತಮ್ಮ ರೆಂಬೆ ಕೊಂಬೆಗಳನ್ನು ಮನೆಯ ಕಿಟಕಿಯ ಸಂದಿನಿಂದ ಒಳತೂರಿಸಿ [ಒಳಮುಖವಾಗಿ] ಬೆಳೆದವಂತೆ.

ಇವೆಲ್ಲಕ್ಕಿಂತಲೂ ಹೆಚ್ಚಾಗಿ ಉತ್ತಮ ಸಂಗೀತ ಭಕ್ತನಿಗೂ ದೇವರಿಗೂ ಬಾಂಧವ್ಯವನ್ನು ಕಲ್ಪಿಸುತ್ತದೆ. ತಮ್ಮ ಹೃದಯದ ವೇದನೆಗಳನ್ನಾಗಲಿ, ಭಾವನೆಗಳನ್ನಾಗಲಿ ದೇವರಲ್ಲಿ ನಿವೇದಿಸಲು ಉತ್ತಮ ಮಾಧ್ಯಮವೂ ಕೂಡ ಹೌದು. ಮಾನಸಿಕ ಒತ್ತಡವನ್ನು ಕಡಿಮೆ ಮಾಡಿ ಶಾಂತಿ, ನೆಮ್ಮದಿಯನ್ನು ಉಂಟುಮಾಡುತ್ತದೆ. ಉತ್ತಮ ಸಂಗೀತವನ್ನು ಹಾಡುವುದರಿಂದ ಮಾತ್ರವಲ್ಲ, ಕೇಳುವುದರಿಂದಲೂ ಮತ್ತು ಹೇಳಿಕೊಡುವುದರಿಂದಲೂ ಶಾರೀರಿಕ ಮತ್ತು ಮಾನಸಿಕ ಶುದ್ಧಿಯಾಗುತ್ತದೆ. ಸಂಗೀತದಲ್ಲಿ ಒಳ್ಳೆಯ ಸಾಹಿತ್ಯವೂ ಸೇರಿರುವುದರಿಂದ ಜ್ಞಾನಾಭಿವೃದ್ಧಿಯೂ ಆಗುತ್ತದೆ.

ಸ್ತೋತ್ರಗಳನ್ನೂ ದೇವರ ನಾಮಗಳನ್ನೂ ಹಾಡುವುದನ್ನು ಚಿಕ್ಕ ವಯಸ್ಸಿನಲ್ಲಿ ಕಲಿಸಿದರೆ ಅದು ಆಜೀವ ಪರ್ಯಂತ ಉತ್ತಮ ಸಾಹಿತ್ಯಿಕ ಸಂಗೀತ ರಸಾನುಭವವಾಗಬಲ್ಲುದು. ವೃತ್ತಿಯನ್ನಾಗಿಸಿ ಕೊಂಡರೆ, ಮನುಷ್ಯನನ್ನೂ ಮನುಷ್ಯನನ್ನಾಗಿ ಇರಿಸಲು ಒಂದು ಉತ್ತಮ ಮಾರ್ಗವಾಗಬಲ್ಲುದು.

ಸಂಗೀತ ಸಾಹಿತ್ಯದಲ್ಲಿ ನಮ್ಮ ಬಾಳನ್ನು ಬೆಳಗಬಲ್ಲ ಅನರ್ಘ್ಯ ರತ್ನಗಳಿವೆ. ಅದನ್ನು ತಮ್ಮದಾಗಿಸಿಕೊಳ್ಳದಿದ್ದರೆ ಅವುಗಳಿಗೆ ಏನೂ ನಷ್ಟವಿಲ್ಲ. ನಷ್ಟ ನಮಗೆ ಸಂಗೀತವೊಂದು ಜ್ಞಾನಪೂರ್ಣ ಜ್ಯೋತಿ ಇರುವ ಹಾಗೆ. ಆ ಜ್ಯೋತಿ ಬೆಳಗಬೇಕಾದರೆ ಸಂಗೀತ ಸಾಹಿತ್ಯವನ್ನು ಕಲಿತು, ಕಲಿಸಿ ಹಾಡಿ ಆನಂದಿಸಬೇಕು.

ದಕ್ಷಿಣ ಭಾರತದಲ್ಲಿ (ಕೊಡಗನ್ನು ಬಿಟ್ಟು) ಶಾಸ್ತ್ರೀಯ ಸಂಗೀತಕ್ಕೆ ಬಹಳ ಪ್ರಾಮುಖ್ಯತೆ ಕೊಟ್ಟಿದ್ದಾರೆ. ಆದರೆ ನಮ್ಮ ಕೊಡಗಿನಲ್ಲಿ ಮಾತ್ರ ಬಹಳ ವಿರಳವಾಗಿದೆ. ಇಂತಹ ಒಳ್ಳೆಯ ಗುಣಗಳಿರುವ ಸಂಗೀತವನ್ನು ನಮ್ಮ ಜನಾಂಗದವರು ತಮ್ಮ ಮಕ್ಕಳಿಗೆ ದೊರಕುವ ಹಾಗೆ ಮಾಡಬೇಕು. ತಂದೆ ತಾಯಿಯರು, ಇಂಗ್ಲೀಷ್, ಗಣಿತ, ವಿಜ್ಞಾನಗಳನ್ನು ಬಿಟ್ಟು ಬೇರೇನು ಕಲಿತರೂ ಅದು ವ್ಯರ್ಥ ಎಂಬ ಭಾವನೆಯಿಂದ ಹೊರಬರಬೇಕು. ಕೊಡಗಿನ ಹಳ್ಳಿಯ ಮಕ್ಕಳಿಗೆ ಇದು ಗಗನ ಕುಸುಮವಾಗಿರಬಹುದು. ಆದರೆ ಪಟ್ಟಣಗಳಲ್ಲಿ ಇರುವವರು ಇದರ ಉಪಯೋಗ ಪಡೆದುಕೊಂಡರೆ ಮುಂದೆ ಒಂದಲ್ಲ ಒಂದು ದಿನ ಹಳ್ಳಿಯ ಮನೆ ಮನೆಗೂ ವ್ಯಾಪಿಸಬಹುದು.

ಮನಸಿದ್ದರೆ ಮಾರ್ಗವಿದ್ದೇ ಇದೆ. ನಿಮ್ಮ ಬೇಡಿಕೆಗಳನ್ನು ಶಾಲಾಕಮಿಟಿಯ ಮುಂದಿಟ್ಟು ಕಾರ್ಯ ಪ್ರವೃತ್ತರಾದರೆ ಹಳ್ಳಿ ಹಳ್ಳಿಗಳಲ್ಲೂ ಶಾಲೆಗಳಲ್ಲಿ ಸ್ವಲ್ಪ ಸಮಯ ಸಂಗೀತಕ್ಕೆಂದೇ ಮೀಸಲಿಟ್ಟು ಒಳ್ಳೆಯ ಉಪಾಧ್ಯಾಯರನ್ನು ಗೊತ್ತುಪಡಿಸಿದರೆ ಮತ್ತು ವಿದ್ಯಾರ್ಥಿಗಳು ಸ್ವಲ್ಪ ಧನ ಸಹಾಯ ಮಾಡಿದರೆ ಸಂಗೀತ ಸಾಮಾನ್ಯರ ಸೊತ್ತಾಗಬಲ್ಲುದು. ಇದಕ್ಕೆ ಎಲ್ಲರ ಸಹಕಾರ ಬಹಳ ಅಗತ್ಯ. ಜೊತೆಗೆ ದೈವ ಪ್ರೇರಣೆಯೂ ಕೂಡ ಅತ್ಯಗತ್ಯ. ಗೌಡ ಜನಾಂಗದವರು ಕೂಡ ಈ ನಿಟ್ಟಿನಲ್ಲಿ ಯಾಕೆ ಸ್ಪಂದಿಸಬಾರದು?

**ಬಿಟ್ಟೀರ ಚೋಂದಮ್ಮ (ಶಂಭು)**



## ಶುಭ ಹಾರೈಕೆ

ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ದಿನಾಂಕ 23-11-1999 'ಆಂದೋಲನ' ಪತ್ರಿಕಾ ಬಳಗ ಏರ್ಪಡಿಸಿದ್ದ ಜಿಲ್ಲಾ ಮಟ್ಟದ ಚಿತ್ರಗೀತೆ ಹಾಗೂ ದೇಶಭಕ್ತಿಗೀತೆ ಸ್ಪರ್ಧೆಗಳಲ್ಲಿ ಕಾನೆಹಿತ್ಲು ಕೆ. ಚೇತನ್‌ರವರು ಪ್ರಥಮ ಸ್ಥಾನವನ್ನು ಪಡೆದು ನಮ್ಮ ಗೌಡ ಜನಾಂಗದ ಕೀರ್ತಿಯನ್ನು ಹೆಚ್ಚಿಸಿದ್ದಾನೆ. ಇವನು ಮಡಿಕೇರಿ ಬ್ಲಾಸಂ ಪ್ರೌಢಶಾಲೆಯಲ್ಲಿ ಒಂಭತ್ತನೆಯ ತರಗತಿಯ ವಿದ್ಯಾರ್ಥಿಯಾಗಿರುತ್ತಾನೆ. ಅವನಿಗೆ ಇನ್ನೂ ಹೆಚ್ಚಿನ ಯಶಸ್ಸು ಸಿಗಲಿ ಎಂದು ಹಾರೈಸುವ,

ಶ್ರೀಮತಿ ನಡುವಟ್ಟಿರ ಚಿತ್ರಲೇಖ ಕುಟ್ಟಪ್ಪ, ಬಿ.ಎಸ್ಸಿ., ಎಜಿ.,
ಅಭಿವೃದ್ಧಿ ಅಧಿಕಾರಿ, ಭಾರತೀಯ ಜೀವ ವಿಮಾ ನಿಗಮ, ಹುಣಸೂರು

## ಶುಭ ಹಾರೈಕೆ



ಕು. ಪೊಕ್ಕುಲಂಡ್ರ ಚಿಣಪ್ಪ ಬಬಿತಾ

ದಿನಾಂಕ 11-10-1999ರಲ್ಲಿ ನಡೆದ ಕೊಡಗು ಜಿಲ್ಲಾ ಮಟ್ಟದ ಪದವಿ ಪೂರ್ವ ಕಾಲೇಜು ಮಟ್ಟದ 3,000 ಮೀಟರ್ ಕ್ರೀಡಾಕೂಟದಲ್ಲಿ ಪಾಲ್ಗೊಂಡು ಪ್ರಥಮ ಸ್ಥಾನ ಗಳಿಸಿ ಜಿಲ್ಲೆಗೆ ಮತ್ತು ಜನಾಂಗಕ್ಕೆ ಕೀರ್ತಿ ತಂದಿದ್ದಾಳೆ. ರಾಜ್ಯ ಮತ್ತು ರಾಷ್ಟ್ರ ಮಟ್ಟದ ಸ್ಪರ್ಧೆಯಲ್ಲಿ ಪಾಲ್ಗೊಂಡು ಯಶಸ್ವಿಯಾಗಲೆಂದು ಶುಭವನ್ನು ಹಾರೈಸುವ

ಮುಂಡೋಡಿ ವಿಜಯ್ ಮಾಚಯ್ಯ, ಕಡ್ಲೇರ ದಿವ್ಯ ಮಾಚಯ್ಯ
ಕಡ್ಲೇರ ಹರ್ಷ ಕುಂಞಪ್ಪ, ತಡಿಯಪ್ಪನ ಶರ್ಮಿಳ ಸುಬ್ಬಯ್ಯ
ಲಕ್ಕಪ್ಪನ ಸವಿತಾ ರಘು

## ಶುಭ ಹಾರೈಕೆ



**ಕುಮಾರಿ ಬಿ. ಎಸ್. ಸವಿತ** 1999ನೇ ಸಾಲಿನ ರಾಜ್ಯಮಟ್ಟದ ಎರಡು ಸುಗಮ ಸಂಗೀತ ಸ್ಪರ್ಧೆಗಳಲ್ಲಿ ಭಾಗವಹಿಸಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರ ಸಹಕಾರದಲ್ಲಿ ಅನನ್ಯ ಮತ್ತು ಹೊಂಬಾಳೆ ಪ್ರತಿಭಾ ರಂಗದವರು ಆಯೋಜಿಸಿದ್ದ ಪ್ರತಿಭೋತ್ಸವ-3 ವಚನಗಳ ಹಿರಿಯ ವಿಭಾಗದ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನವನ್ನು ಮತ್ತು ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್‌ನವರು ಆಯೋಜಿಸಿದ್ದ ಕನ್ನಡ ಗೀತೆ ವಯಸ್ಕರ ವಿಭಾಗದ ಸ್ಪರ್ಧೆಯಲ್ಲಿ "ಪ್ರತಿಭಾಶ್ರೀ"-2 ಪ್ರಶಸ್ತಿಯನ್ನು ಗಳಿಸಿ ಗೌಡ ಜನಾಂಗದ ಕೀರ್ತಿಗೆ ಪಾತ್ರಳಾಗಿರುತ್ತಾಳೆ. ಈ ಸುಗಮ ಸಂಗೀತ ಮೇಳದ ಸ್ಪರ್ಧೆಗಳು ಕ್ರಮವಾಗಿ 3-10-99ರಿಂದ 10-10-99 ಮತ್ತು 31-10-99ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಕೃಷ್ಣರಾಜ ಪರಿಷನ್ಮಂದಿರದಲ್ಲಿ ಜರುಗಿತು. ತಂದೆ ಶ್ರೀ ಬಿ. ಶಿವರಾಮಗೌಡರವರು ರಾಜ್ಯಪಾಲರಿಗೆ ಹಿರಿಯ ಸಹಾಯಕರಾಗಿ, ರಾಜ ಭವನ ಬೆಂಗಳೂರಿನಲ್ಲೂ ಹಾಗೂ ತಾಯಿ ಕೆ. ಎಂ. ಕುಸುಮಾವತಿಯವರು ಸ. ಮಾ. ಕ. ಪ್ರಾ. ಪಾಠಶಾಲೆ, ಜೀವನಭಿಮಾ ನಗರ, ಬೆಂಗಳೂರು ಇಲ್ಲಿ ಸಹ ಶಿಕ್ಷಕಿಯಾಗಿ ಇಬ್ಬರೂ ಸೇವೆ ಸಲ್ಲಿಸುತ್ತಿದ್ದಾರೆ. ಕುಮಾರಿ ಸವಿತ ಶಾಸ್ತ್ರೀಯ ಸಂಗೀತದಲ್ಲಿ ಜೂನಿಯರ್ ಪರೀಕ್ಷೆಯನ್ನು ಪ್ರಥಮ ದರ್ಜೆಯಲ್ಲಿ ಉತ್ತೀರ್ಣತೆ ಹೊಂದಿದ್ದಾಳೆ. ಈಗ ಇವಳು ಮೊದಲನೇ ಸೆಮಿಸ್ಟರ್ ಬಿ. ಇ. (ಕಂಪ್ಯೂಟರ್ಸ್) ಅನ್ನು ಬೆಂಗಳೂರಿನ ವಿ.ಐ.ಟಿ. ಕಾಲೇಜು, ಕೋರಮಂಗಲದಲ್ಲಿ ವ್ಯಾಸಂಗ ಮಾಡುತ್ತಿದ್ದಾಳೆ.

## ಪುಣ್ಯಸ್ಮರಣೆ



ಪಾಂಡನ ಸುಬ್ಬಯ್ಯ, Ex. MLA
ಜನನ : 9-7-1915, ಮರಣ : 12-12-1997

ದಿನಾಂಕ 12-12-1997ರ ಮಟ ಮಟ ಮಧ್ಯಾಹ್ನ ಮಡಿಕೇರಿ ಗೌಡ ಸಮಾಜದ ಸಭೆಯಲ್ಲಿ ಕೊನೆಯುಸಿರೆಳೆಯುವ ಅರ್ಧ ಗಂಟೆ ಮೊದಲು ನೀವು ನನಗೂ ಮತ್ತು ಸಂಗಾತಿಯ ಶ್ರೇಯೋಭಿವೃದ್ಧಿಗಾಗಿ ನೀಡಿದ ಸಲಹೆ "ಬಾವ ಎಷ್ಟೆ ಕಷ್ಟ ಬಂದರುಸ ಪತ್ರಿಕೆನ ನಿಲ್ಲಿಸ್ಬೇಡಿ" ಎಂದಿದ್ದು ಇಂದು ಸಹ ನನ್ನ ಮನಸ್ಸಿನಲ್ಲಿ ಗುಂಯ್‌ಗುಟ್ಟುತ್ತಿರುತ್ತದೆ. ನನ್ನ ಬೆನ್ನ ಹಿಂದೆಯೇ ಇದ್ದು ಪತ್ರಿಕೆಗೆ ಅಗೋಚರವಾಗಿ ಸಲಹೆ ನೀಡುತ್ತಿರುವ ನಿಮ್ಮ ಗುಂಗಿನಲ್ಲಿಯೇ ನಾನಿದ್ದು, ಪತ್ರಿಕೆ ತನ್ನ ನಾಲ್ಕನೆ ವರ್ಷಕ್ಕೆ ಪಾದಾರ್ಪಣೆ ಗೈಯುತ್ತಿರುವ ಈ ಸಂದರ್ಭದಲ್ಲಿ ನಿಮ್ಮ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು ನೀಡಲಿ ಎಂದು ಬೇಡುತ್ತೇನೆ.

ಪಟ್ಟಡ ಮುತ್ತಣ್ಣ ಪ್ರಭಾಕರ
ಗೌರವ ಸಂಪಾದಕ ಮತ್ತು ವ್ಯವಸ್ಥಾಪಕ, ಕೊಡಗು, ಸಂಗಾತಿ ಪಾಕ್ಷಿಕ ಪತ್ರಿಕೆ

K. R. N. N. - 240 10-01-96 TCI Kar. 09592



# ಕೊಡ್‌ಗ್ ಗೌಡ ಸಾಂಸ್ಕೃತಿಕ ಅಕಾಡೆಮಿ (ರಿ.)

ಗುಡ್ಡೆಮನೆ ಅಪ್ಪಯ್ಯಗೌಡ ದಾರಿ, ಮಡಿಕೇರಿ

ಹೊಸ ಸಹಸ್ರಮಾನ ಇಸ್‌ವಿಗೆ ಕಾಲಿಡ್‌ವ ಪ್ರಯುಕ್ತ "ಆದರ್ಶ ದಂಪತಿ" ಸ್ಪರ್ಧೆ

ಮತ್ತ್

ಗೌಡ ಜನಾಂಗದ ಆಚಾರ, ವಿಚಾರ, ಭಾಷೆ, ಸಂಸ್ಕೃತಿಗೆ ಸಂಬಂಧಪಟ್ಟಂಗೆ ಗೂಡೆಗಳ್ಗ್ ಮತ್ತ್ ಹೈದಗಳ್ಗ್

## "ಫ್ಯಾಶನ್ ಶೋ"

ಸ್ಪರ್ಧೆ ಏರ್ಪಾಡ್ ಮಾಡ್ಯೊಳೊ.

ಆದರ್ಶ ದಂಪತಿ ಸ್ಪರ್ಧೆಗೆ ಟಿಕೆಟ್ ಹಣ ರೂ. 100/-

ಫ್ಯಾಶನ್ ಶೋ ಸ್ಪರ್ಧೆಗೆ ಟಿಕೆಟ್ ಹಣ ರೂ. 50/-

ಬಹುಮಾನಗ

1. ಒಂದ್ ಪವನ್ ಚಿನ್ನ ಮತ್ತ್ ಟ್ರೋಫಿ
2. ಅರ್ಧ ಪವನ್ ಚಿನ್ನ ಮತ್ತ್ ಟ್ರೋಫಿ

1. ರೂ. 2,000/- ಮತ್ತ್ ಟ್ರೋಫಿ
2. ರೂ. 1,000/- ಮತ್ತ್ ಟ್ರೋಫಿ

ಗೂಡೆಗಳ್ಗ್ ಮತ್ತ್ ಹೈದಗಳ್ಗ್ ಬ್ಯಾರೆ ಬ್ಯಾರೆ

ತಾರೀಖ್ : 31-12-1999

ಜಾಗ : ಗೌಡ ಸಮಾಜ ಮಡಿಕೇರಿ

ರಾತ್ರೆ ಹೊತ್ತ್ 8ರ್‌ಂದ ಮಧ್ಯ ರಾತ್ರೆ 12ರ ವರೆಗ್



ಅಧ್ಯಕ್ಷ ಮತ್ತ್ ಆಡಳಿತ ಮಂಡಳಿಯವ್

ಸರ್ವರಿಗೂ ಸುಸ್ವಾಗತ



ಮದೆ ಗ್ರಾಮದ ನೆಕ್ಕಿಲನ ಅಣಯ್ಯನವ್ರ ಮಂಙ ಮೋಹನ (ಮಾಧವ) ಮತ್ತ್ ಮಕ್ಕಂದೂರು ನಿವಾಸಿ ಮೊಳ್ಳೇರ ಬಸಪ್ಪನವ್ರ ಮಗ್ಳು ಲಲಿತ (ಅಶ್ವಿನಿ) ಇವು ತಾರೀಖ್ 29-11-1999ರ್ಲಿ ಮೈಸೂರಿನ ಕೊಡಗು ಗೌಡ ವಿದ್ಯಾರ್ಥಿ ನಿಲಯಲಿ ದಂಪತಿಗಳಾದೊ.

ನಿಮ್ಮಿಬ್ಬರ ಈ ಬಂಧನ ಜನ್ಮ ಜನ್ಮಕ್ಕೂ ಒಂದಾಗಿರ್ಲಿ ಮತ್ತ್ ಹೊಸ ಜೀವನಲಿ ಎಲ್ಲಾ ರೀತಿಯಿಂದ ಲಾಯ್ಕಾಗಿ, ಪೊರ್ಲಾಗಿ ಬಾಳಕುತ್ತೇಳಿ. ಕುಲದೇವ್ರು ವೆಂಕಟ್ರಮಣ ಮತ್ತ್ ಸಬ್ಬಮ್ಮ ದೇವಿಯ (ಶಾರದಾಂಬೆಯ) ಕೃಪಾಕಟಾಕ್ಷ ಸದಾ ಇರಲಿತ್ತೇಳಿ ನಾವು ಬೇಡಿಕಂಡವೆ.

ಯಿಂದ : ಬೈನೆರವನ ಇಂದ್ರಕುಮಾರ್
ಬೈನೆರವನ ಪರಶುರಾಂ
ಮುದಿಯಾರ್ ಗಣೇಶ್

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.